# ಶೂದ್ರ

ಬೆಲೆ : 1-75

ಸುಚೇತನ ಸ್ವರೂಪ — ಪ್ರೊ. ವಿಜಯಶ್ರೀ ಸಬರದ — ಎಂ. ಎಸ್. ವ್ಯಾಸರಾವ್
ರಮಜಾನ್‌ದರ್ಗಾ—ಸಿ. ವಿ. ಪಾಟೀಲ್—ಶ್ರೀಕೃಷ್ಣ ಚೆನ್ನಂಗೋಡ್—ಕೆ. ಎಂ.
ಮುನಿಕೃಷ್ಣಪ್ಪ — ಪ್ರೊ. ಕ. ವೆಂ. ರಾಜಗೋಪಾಲ್ — ಕನಸಿಗೊಂದು ಕಣ್ಣು.



ಮುಕ್ತ ಚರ್ಚೆಗಾಗಿ ಶೂದ್ರ ತಿಂಗಳ ಪತ್ರಿಕೆ

ಸಂಚಿಕೆ : 12 ಅಕ್ಟೋಬರ್-1984 ಸಂಪುಟ : 6

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ–ಆನಂದಮೂರ್ತಿ

ಮುಖಪುಟದ ಕಲಾವಿದರು : ಜಿ. ಎಸ್. ಶೆಣೈ

'ಶೂದ್ರ' ಬರದಿದ್ದರೆ ಪತ್ರ ಬರೆಯಿರಿ. ರಿನ್ಯೂ ಮಾಡಿಸಿ. ಚಂದಾ ಕಳಿಸಿದ ಮೇಲೆ ಒಂದು ಪತ್ರ ಬರೆಯಿರಿ. ಚಂದಾ ಕಳಿಸುವಾಗ ಚೆಕ್ (21 ರೂ.) ಅಥವಾ ಡ್ರಾಫ್ಟ್ (20 ರೂ.) ಮೂಲಕ ಕಳಿಸಿದರೆ ಒಳಿತು.

ಆಜೀವ ಚಂದಾ : 200ರೂ (ನಾಲ್ಕು ಕಂತುಗಳಲ್ಲಿ)

ವಾರ್ಷಿಕ ಚಂದಾ : 20ರೂ

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜ್ ಅಂಚೆ,
ಬೆಂಗಳೂರು–560 029

ಒಂದು ಸೂಚನೆ : ಈ ಸಂಚಿಕೆಯಲ್ಲಿ ಚಂದ್ರಶೇಖರ ತಾಳ್ಯ, ವೀಚಿ ಮತ್ತು ವೇಣುಗೋಪಾಲ ಸೊರಬರವರ ಕವನಗಳನ್ನು ಪ್ರಕಟಿಸಬೇಕಾಗಿತ್ತು. ಆದರೆ ಪುಟಗಳ ಸಮಸ್ಯೆಯಿಂದ ಪ್ರಕಟಿಸಲಾಗಲಿಲ್ಲ. ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

ಸಂ.

# ಇತಿಹಾಸ: ಜಾತಿ ಮತ್ತು ವರ್ಗಸಂಬಂಧಗಳು

—ಸುಚೇತನ ಸ್ವರೂಪ

ಪ್ರಿಯ ಮಹಾದೇವ್,

ನಿಮಗೊಂದು ಪತ್ರ ಬರೆಯಬೇಕೆಂದು ಬಹಳ ಹಿಂದೆಯೇ ಏಕಾನ ಹಾಕಿಕೊಂಡಿದ್ದೆ. ಯಾಕೋ ಏನೋ ಅಂತೂ ಬರೆಯಲಾಗಿರಲಿಲ್ಲ. ಕತ್ತಲೆ ಒಂದು ತರಹ ಕಣ್ಣತ್ತಿ ಬಂದ ಹಾಗೇ. ಸಮಾಜವಾದ ಮಾತನಾಡುವ ಬಹುಪಾಲು ಜನರ ಮಾತೇ ಬೇರೆ, ಬದುಕೇ ಬೇರೆ, ತತಕ್ಷಣದ ಪರಿಸರವೂ ಅಂತಾದ್ದೇ. ಇವೆಲ್ಲದರ ನಡುವೆಯೇ ಬದುಕುತ್ತಿರುವ ನಾವುಗಳು ಬೇರೆಯಾಗಿಲ್ಲದಿರಬಹುದು ಎಂಬ ನೋವು: ಇತ್ಯಾದಿಗಳು ಬರವಣಿಗೆಗೆ ಅವಕಾಶಮಾಡಿಕೊಡುತ್ತಿರಲಿಲ್ಲ ಎಂದು ಕಾಣುತ್ತದೆ. ಇರಲಿ. ನನ್ನ ಕಣ್ಣೆದುರೇ ಕಳೆದುಹೋದ ಸಮಾಜವಾದಿ ಪಕ್ಷದ ಬಗ್ಗೆ-ನಿಮ್ಮ ಸ್ವಗತ ಬರೆಯುವಂತೆ ಮಾಡಿದೆ. ಒಕ್ಕಣಿಕೆ ಧೀರ್ಘ ಅನ್ನಿಸಬಹುದು. ಆದರೆ ಅದು ನನ್ನ ತಪ್ಪಲ್ಲ ಮಹರಾಯರೇ!

ಘೋಷಣೆಗಳನ್ನು ಕೇವಲ ಕದಿಯುವುದರ ಮೂಲಕ ಒಂದು ಪಕ್ಷವನ್ನ ಸಂಪೂರ್ಣ ನೆಲಸಮಮಾಡಿಬಿಡಹುದು. ಅಂತಹ ರಾಜಕೀಯ ಚಮತ್ಕಾರಗಳಿಂದ ಪ್ರಪಂಚದ ಇತಿಹಾಸ ತತಾನುತುವಾಗಿದೆ. ಲೋಹಿಯಾ ವಿಚಾರದಲ್ಲೂ ಆದದ್ದು ಅದೇ, ಕೆಲವರು ಘೋಷಣೆಗಳನ್ನು ಕದ್ದರೆ, ಕೆಲವರು ಲೋಹಿಯಾ ಚಿಂತನೆಗೆ ಬೇರೆ ಬಣ್ಣ ಕಟ್ಟಿದರು. ಪರಿಣಾಮ ಈವತ್ತಿನ ಪರಿಸ್ಥಿತಿ ಲೋಹಿಯಾ, ಶಾಂತವೇರಿ. ಅನಂತರ ತೇಜಸ್ವಿ, ಕಾಗೋಡು ತಿಮ್ಮಪ್ಪ ಮುಂತಾದ ಮಹಾಶಯರು. ಮುಂದಿನ ಪೀಳಿಗೆ ಎಲ್ಲಿ? ಅಖಿಲ ಭಾರತ ಮಟ್ಟದಲ್ಲೂ ಇದೇ ಹಾಡು!

---

ಸುಚೇತನ ಸ್ವರೂಪರವರ ಈ ದೀರ್ಘವಾದ ಚರ್ಚೆ ಅರ್ಥಪೂರ್ಣ ಅನ್ನಿಸಿರುವುದರಿಂದ ಇದನ್ನು ಎರಡು ಕಂತುಗಳಲ್ಲಿ ಪ್ರಕಟಿಸುತ್ತಿದ್ದೇವೆ. ಇದನ್ನು ದೇವನೂರು ಮಹಾದೇವರವರನ್ನು ಉದ್ದೇಶಿಸಿ ಬರೆದ ಪತ್ರ. ಸುಚೇತನ ಸ್ವರೂಪರವರು ಪ್ರಜಾವಾಣಿಯಲ್ಲಿ ಉಪಸಂಪಾದಕರಾಗಿದ್ದಾರೆ. ಸಂ:

---

'ಪಂಚಮ' : ದಲಿತರು ಮತ್ತು ರೈತ ಚಳವಳಿ ವಿಶೇಷ ಸಂಚಿಕೆ, ನವಂಬರ್ 1983

ಇಂದಿರಾ ಗಾಂಧಿ ಮಾತಾಯಿ ತಂದ 'ಬ್ಯಾಂಕ್ ರಾಷ್ಟ್ರೀಕರಣ' ಮಹಾ ಕ್ರಾಂತಿಕಾರಿ ಎನಿಸಿ ಕೆಲವರು ಚಂಗನೇ ಹಾರಿದರು. ಒಂದನೇ ಘಟ್ಟ. ದೇವರಾಜ್ ಅರಸು ಮುಂತಾದ ಕಾಂಗ್ರೆಸ್ ಮಂದಿ ತಂದ ಭೂಸುಧಾರಣೆ ಮತ್ತು ವಿಕಾಸಲಾತಿ, ನೀತಿ ಇತ್ಯಾದಿ ಕಾರ್ಯಕ್ರಮಗಳು: ಸಮಾಜವಾದಿ ಬೀಸು ಹೆಜ್ಜೆಗಳಾಗಿ ತೋರಿ ಬಂದು, ಮತ್ತೆ ಕೆಲವರು ಪಲಾಯನ ಮಾಡಿದರು. ಲೋಹಿಯಾವಾದಿಗಳು ಹಾಕದ ವೇಷ ಇಲ್ಲ. ಅವರು ಸೇರಿರದ ಪಕ್ಷಗಳು ಈವತ್ತು ಈ ದೇಶದಲ್ಲಿಲ್ಲ. ಮಧ್ಯಮವಾದಿ ನಾಯಕನ ಹಿಂಬಾಲಕರಾದವರು ಯಾವಾಗಲೂ ಸಮಯ ಸಾಧಕರು ಅಥವಾ ಅವಕಾಶವಾದಿಗಳಾಗಿರುತ್ತಾರೆ: ಎನ್ನುವ ಮಾರ್ಕ್ಸ್‌ವಾದಿ ಮಾತನ್ನು ಲೋಹಿಯಾವಾದಿಗಳು ನೂರಕ್ಕೆ ನೂರು ದಿಟ ಮಾಡಿದರು,

ಲೋಹಿಯಾ ತುಳಿದ ಹಾದಿಯನ್ನು ರಾಜಕೀಯ ಪಂಡಿತರು ಮಧ್ಯಮಾರ್ಗಿ, ಮಧ್ಯಮವಾದಿ ಅಥವಾ ಮಧ್ಯಮ ಪಂಥೀಯ (Centrist) ಎಂದು ಗುರುತಿಸುತ್ತಾರೆ. ಎಡಭಾಗದಲ್ಲಿ ಕಮ್ಯುನಿಸ್ಟರು, ಬಲಭಾಗದಲ್ಲಿ ನೆಹರೂ ವಂಶ; ಮೈಸೂರು ಸಯ್ಯಾಜಿರಾವ್ ರಸ್ತೆಯ ಮಟ ಮಟ ಮಧ್ಯಭಾಗದಲ್ಲಿ ಗುರೀಟು ನಡೆಯುವ ನಿರ್ಧಾರ; ಲೋಹಿಯಾ ದಾರಿ ಕಂಡುಕೊಂಡದ್ದು ಹಾಗೇ. ಆತ ಇರುವತನಕ ಆತನ ಪಕ್ಷ ಇತ್ತು. ಲೋಹಿಯಾ ಎಂಬೋ ಎಂಜಿನ್ ಅಪಘಾತದಲ್ಲಿ ಬಲಿಯಾದ ಮಾರನೇ ದಿನವೇ: ಲೋಹಿಯಾವಾದಿಗಳೆಂಬ ಡಬ್ಬಿಗಳು ಚೆಲ್ಲಾಪಿಲ್ಲಿಯಾಗಿ; ಯಾವು ಯಾವುದೋ ಗಾಡಿಗಳಿಗೆ ತಗುಲಿಹಾಕಿಕೊಂಡವು.

ಸಮಾಜವಾದಿ ಪಕ್ಷ 1977ರಂದು ಜನತಾ ಎಂಬುವಲ್ಲಿ ವಿಲೀನವಾಯಿತು ಎಂಬುದು ಕೇವಲ ಔಪಚಾರಿಕವಾದ ಮಾತು. ಸಮಾಜವಾದಿಗಳು ಆ ವೇಳೆಗಾಗಲೇ ಜೀವ ಕಳೆದುಕೊಂಡಿದ್ದು, ಎಲುಬುಗಳು ಮಾತ್ರ ಹಳಿತಪ್ಪಿ ಜೋತಾಡುತ್ತಿದ್ದವು. ಹಾಗಾಗಿ ಬಂಗಾರಪ್ಪ, ಕಾಗೋಡು ತಿಮ್ಮಪ್ಪ ಇತ್ಯಾದಿಗಳು ಕಾಂಗ್ರೆಸೇರಿದ್ದು ಪಕ್ಷಾಂತರವಾಗುವುದಿಲ್ಲ. ಜಾರ್ಜ್ ಫರ್ನಾಂಡೀಸ್ ಮುಂತಾದೋರು ಜನತಾದಲ್ಲಿರೋದು ಮತ್ತು ತೇಜಸ್ವಿ ಇತ್ಯಾದಿಗಳು ಜನತಾ ಬೆಂಬಲಿಸಬೇಕಾಗಿರುವುದು ಸಹಜವಾಗುವುದಾದರೆ: ಬಂಗಾರಪ್ಪ ಕಾಂಗ್ರೆ ಸೇರುವುದು ಅಷ್ಟೇ ಸಹಜ ಬೆಳವಣಿಗೆಯಾಗುತ್ತದೆ!

ಕಾಂಗ್ರೆನಲ್ಲಿ ಒಬ್ಬಾಕೆ ಚಕ್ರಾಧಿಪತಿ ಇದಾಳೆ, ಅಲ್ಲಿ ಒಬ್ಬಾನೊಬ್ಬ ಯುವರಾಜ ಅದಾನೆ; ಆದರೆ ನೋಡಿ ಜನತಾದಲ್ಲಿ ಅದೆಲ್ಲ ಇಲ್ಲ: ಎಂಬಿತ್ಯಾದಿ ಕಾಂಗ್ರೆ–ಜನತಾ ನಡುವೆ ಅಂತರ ಕಾಣಬಹುದಾದಂತೆ, ಬಂಗಾರಪ್ಪ–ಜೆ. ಎಚ್. ಪಟೇಲ್ ನಡುವೆ ಅಂತರ ಹುಡುಕಬಹುದಾದರೂ; ತಳಾದಿಯಲ್ಲಿ ಜನತಾವು ಕಾಂಗ್ರೆನಂತೆಯೇ

ಪಟ್ಟಭದ್ರರ ಪಕ್ಷವಾಗಿದೆ ಎಂಬ ಚಿತ್ತಲೆ ಸತ್ಯವನ್ನು ಮರೆಬಾರದು. ಎರಡನೇದಾಗಿ ಕಾಂಗ್ರೆ ಹೋಗಿ ಜನತಾ ಅಧಿಕಾರಕ್ಕೆ ಬಂದರೆ; ದೇಶದ ರಾಜಕೀಯ ಭೂಪಟದ ಮೇಲೆ ಗಮನಾರ್ಹ ಬೆಳವಣಿಗೆ ಆಗುತ್ತದೆ ಎಂದು ನಂಬಲೇಬೇಕಾದ ದುಸ್ಥಿತೀಲಿ ನಾವಿದೇವೆ. ಎಂಬ ಕರಾಳ ವಿಚಾರವನ್ನು ಕಡೆಗಣಿಸಬಾರದು. ಅಷ್ಟರಲ್ಲೋ ಸುಸ್ತಾಗಿ ನಿಲ್ಲಲಾಗದು. ಏಕೆಂದರೆ ಒಂದು ಪಕ್ಷ ಮತ್ತೆ ಮಂದಿ ಅಧಿಕಾರಕ್ಕೆ ಬಂದಾಗಲೂ: ಎಂತಾದ್ದು ಮಹತ್ವದ ಬದಲಾವಣೆ ಆಗುವ ಸುಲಭರೂಪದಲ್ಲಿ ಪರಿಸ್ಥಿತಿ ಇಲ್ಲ.

ಉದಾಹರಣೆಗೆ, ರಾಮಂಕೃಷ್ಣ ಹೆಗಡೆ ಮಂತ್ರಿಮಂಡಳ ತಂದ ಬದಲಾವಣೆ. ಪ್ರಜಾ ಸತ್ತೆಯ ಹೆಸರಿನಲ್ಲಿ ಒಕ್ಕಲಿಗ–ಬ್ರಾಹ್ಮಣ–ಲಿಂಗಾಯಿತ ಪಟ್ಟಭದ್ರ ಹಿತಾಸಕ್ತಿಗಳೇ ಮತ್ತೆ ತಲೆ ಎತ್ತಿ ಬಂದವು ಮಾತಾಡೋ ಹಂಗಿಲ್ಲ. ಮಾತಾಡಿದರೆ ನೆಹರೂ ವಂಶದ ಕಿಂಕರರು, ಆ ಸದಾವಕಾಶಕ್ಕಾಗಿ ನಾಲಿಗೆ ಚಾಚಿ ಕಾದು ನಿಂತಿದ್ದಾರೆ. ಮಾತಾಡದೇ ಇರೋ ಹಂಗಿಲ್ಲ. ಜನತಾದಲ್ಲಿರುವ ಪಟ್ಟಭದ್ರ ಹಿತಾಸಕ್ತಿಗಳೇ ಪ್ರತಿಗಾಮಿಗಳಾಗಿ ರೂಪುಗೊಂಡಿದ್ದು : ದರ್ಬಾರು ನಡೆಸುತ್ತಿವೆ. ಲೋಹಿಯಾವಾದಿಗಳು ಎನಿಸಿಕೊಂಡ ಕೆಲವರು ಅಲ್ಲಿ ಬೆನ್ನು ತಿರುಗಿಸಿ ನಿಂತಿರೋದು, ಕೆಲವರಿಗೆ ದುರಂತವಾಗಿ ಕಾಣಿಸ ಬಹುದು!

ರಾಜಕೀಯ ಹೋರಾಟಗಾರನಾಗಿ ಲೋಹಿಯಾ ಮತ್ತು ಚಿಂತನಾಶೀಲ ಶಕ್ತಿಯಾಗಿ ಲೋಹಿಯಾ: ಲೋಹಿಯಾವಾದಿ-ಸಮಾಜವಾದಿ ಸಂಘಟನೆ ಪಡೆದು ಕೊಂಡ ರೂಪ ಇದಾಯಿತು; ಮತ್ತೊಂದು ಮಗ್ಗುಲಾದ ಲೋಹಿಯಾ ಚಿಂತನೆ ಎಲ್ಲಿ ಹೋಯಿತು!

ಬ್ರಾಹ್ಮಣ ಮತ್ತು ಕ್ಷತ್ರಿಯ ನಡುವಣ ಘರ್ಷಣೆಯೇ ಭಾರತದ ಚರಿತ್ರೆ ಎಂದು ವಿಲ್‌ಡುರ* 1930ರ ಸುಮಾರಿನಲ್ಲೇ ಗುರುತಿಸಿದರು. ಆ ಮಾತು ಲೋಹಿಯಾ ಹೇಳಿದಂತಿದೆ. ಕ್ಷತ್ರಿಯ ಅನ್ನೋದು ಒಂದು ಜಾತೀನೇ ಅಲ್ಲ, ಎಂದು ತೋರಿಸಿದ ಕೆ. ಎಂ. ಫಣಿಕ್ಕರ್ ಅವರ ಪ್ರಕಾರ, ಎಲ್ಲಾ ಶೂದ್ರರೂ ಕ್ಷತ್ರಿಯರಾಗಿದ್ದಾರೆ. ಈ ಮಾತನ್ನು ಒಪ್ಪಿಕೊಳ್ಳುವುದಾದಲ್ಲಿ ಬ್ರಾಹ್ಮಣ ಮತ್ತು ಶೂದ್ರ ನಡುವಣ ಘರ್ಷಣೆ ಚರಿತ್ರೆ ; ಎಂದು ವಿಲ್‌ಡುರ ಅವರ ವಾಕ್ಯವನ್ನು ಹಿಗ್ಗಲಿಸಬಹುದು. ಆದರೆ ಆನಂತರದಲ್ಲಿ ಬಂದ ರೊಮಿಲ್ ಥಾಪರ್, ಬಿಪಿನ್ ಚಂದ್ರ, ಸುಮಿತ್ ಸರ್ಕಾರ್, ಇರ್ಫಾನ್ ಹಬೀಬ್ ಮೊದಲಾದವರು ಮಾರ್ಕ್ಸ್‌ವಾದದ ಜಂತಿಯ ಮೇಲೆ ಭಾರತದ ಇತಿಹಾಸ ಬಿಡಿಸುವ ಪ್ರಯತ್ನ ನಡೆಸಿದರು. ಅಂತಹ ಅದ್ಭುತ ಸಾಧ್ಯವಾದ ಮೇಲೆ

Story of Civilization—ಮೊದಲ ಸಂಪುಟ

ಲೋಹಿಯಾ ಚಿಂತನೆಯು ಹಸಿ ಇಟ್ಟುಕೊಂಡು, ಏಕೆ ಭಾರತದ ಚರಿತ್ರೆ ಬಿಚ್ಚಿ ತೋರಿಸಲಾಗಲಿಲ್ಲ?

ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಭಾರತದ ಇತಿಹಾಸ ಕುರಿತು ಬರೆದ ಆ ಜನ: ತೇಜಸ್ವಿ ತಲೆಮಾರಿಗೆ ಸೇರಿದವರು ಎಂಬುದು ಗುಮನಿಸಬೇಕಾದ ಸಂಗತಿ. ಅದೇ ರೀತಿ ಈ ದೇಶದಲ್ಲಿ ಮಾರ್ಕ್ಸ್‌ವಾದಿ ಅರ್ಥಶಾಸ್ತ್ರಜ್ಞ, ಮಾರ್ಕ್ಸ್‌ವಾದಿ ಬರಹಗಾರ ಎಂದು ಕರದುಕೊಳ್ಳುವ ಜನರಿದ್ದಾರೆ. ಲೋಹಿಯಾ ಚಿಂತನೆ ಹಾಗೆ ಏನಾದರೂ ಪರಿಣಾಮಮಾಡಿದೆಯೋ: ಎಂದು ಇಡೀ ದೇಶದಲ್ಲೆಲ್ಲ ಟಾರ್ಚ್ ಹಾಕಿಕೊಂಡು ಹುಡುಕಿದರೆ, ಎಲ್ಲಾ ಸ್ತಬ್ಧ! ಅನಂತಮೂರ್ತಿ ಅಂತಾದೊಂದು ಪ್ರಯತ್ನ ನಡೆಸಿದರು ವಿಚಿತ್ರ ಅಂದರೆ ಮಾರ್ಕ್ಸ್‌ವಾದಿ ಬರಹಗಾರರ ಕೃತಿಗಳಲ್ಲಿ ಮಾರ್ಕ್ಸ್‌ವಾದಿ ಚಿಂತನೆ: ಅನುಭವವಾಗಿ ಅರಳುತ್ತಾ ಕಲೆಯಾಗಿ ಮೈಪಡೆದುಕೊಳ್ಳುವುದನ್ನು ಕಾಣಬಹುದು, ಉದಾಹರಣೆಗೆ ಬ್ರೆಕ್ಟ್. ಆದರೆ 'ಅವಸ್ಥೆ'ಯಲ್ಲಿ ಲೋಹಿಯಾವಾದಿ ಅವರಣ ರೋಗದ ಕೋಳಿಯಂತೆ ಇಂಚಿಂಚೆ ಸಾಯುತ್ತಾ ಹೋಗುತ್ತದೆ.

ಮಾರ್ಕ್ಸ್‌ವಾದಿ ಬುದ್ಧಿಜೀವಿ ಜನ-ಲೋಹಿಯಾವಾದಿಗಳ ಜತೆ ಹೋಲಿಸಿದಲ್ಲಿ ಗಣನೀಯ ಸಾಧನೆ ಮಾಡಿದಾರೆ. ಮಾರ್ಕ್ಸ್‌ವಾದಿ ಎಂದು ಕರೆದುಕೊಳ್ಳುವ ಪಕ್ಷಗಳಿದಾವೆ, ಸಂಘಟನೆಗಳಿದಾವೆ. ಲೋಹಿಯಾವಾದಿಗಳು ಎನ್ನುವ ಪಕ್ಷ ಇಲ್ಲ. ಒಂದು ಸಂಘಟನೆ ಇಲ್ಲ. ಲೋಹಿಯಾವಾದಿ ಚಿಂತನಶೀಲ ಜೀವಿಗಳೇ ಇಲ್ಲ-ಇರುವವರೆಲ್ಲ ನಿವೃತ್ತರು ಅಥವಾ ಮಾಜಿಗಳಾಗಿದಾರೆ, ಇದಿಷ್ಟು ಎಲ್ಲರ ಬರಿಗಣ್ಣಿಗೆ ಎದ್ದು ಕಾಣಿಸುವ ಸಂಗತಿ.

ಆದರೆ ಮಾರ್ಕ್ಸ್‌ವಾದಿ ಸಂಘಟನೆಗಳ ಮತ್ತು ಜನರ ಒಳಗಿನ ಮುಖವೇ ಬೇರೆ ಆಗಿದೆ. ಮಾರ್ಕ್ಸ್ ಹೆಸರು ಹೇಳಿ ಇಡೀ ಜಗತ್ತನ್ನೇ ಗಡಗಡ ನಡುಗಿಸಿ ಸಿಂಹಾಸನ ಏರಿದ ಕಮ್ಯೂನಿಸ್ಟ್ ಸರ್ಕಾರಗಳ ನಿಜರೂಪ ಜಗಜ್ಜಾಹೀರಾಗಿ ದಶಕಗಳೇ ಕಳೆದವು, ಅದರಿಂದಾಗಿ ಕನಸು ಭಗ್ನಗೊಂಡು ಹೊಸದಾರಿಗಾಗಿ ಅತರಿಸುವವರ ಸಂಖ್ಯೆ ದಿನೇ ದಿನೇ ಹೆಚ್ಚಬೇಕಿತ್ತು. ಆದರೆ ಪರಿಸ್ಥಿತಿ ಹಂಗಿಲ್ಲ. ಮಾರ್ಕ್ಸ್‌ವಾದಕ್ಕೆ ಈ ದೇಶದೊಳಗೆ ಭವಿಷ್ಯ ಇದೆಯೇ-ಇಲ್ಲವೆ, ಸಂಗತವೇ-ಅಲ್ಲವೇ, ಎಂಬ ಚರ್ಚೆ ಇನ್ನು ನಡೀತಾನೇ ಇದೆ. 'ನಿನ್ನಗಂಡ ಇದ್ದರೂ ಬಂದೇ.ನನ್ನಗಂಡ ಸತ್ತಿದ್ದರೂಬಂದೇ-ಎಂಬ ಹಳ್ಳಿ ಹೆಂಗಸಿನ ಮಾತು' ಮಾರ್ಕ್ಸ್‌ವಾದಿ ಮಂತ್ತು ಲೋಹಿಯಾವಾದಿ ಸಂಘಟನೆ ಮತ್ತು ಮಾರ್ಕ್ಸ್‌ವಾದಿ ಮತ್ತು ಲೋಹಿಯಾವಾದಿಗಳ ನಿಜಸ್ಥಿತಿಯನ್ನು ಕರಾರುವಕ್ಕಾಗಿ ನೀಡುತ್ತದೆ.

ಈ ದೇಶದ ರೋಗಗ್ರಸ್ತ ಸಮಾಜ ಮತ್ತು ಜಡ್ಡುಗಟ್ಟಿದ ಜನಮನದಲ್ಲಿ; ಶಾಂತಿ ಹುಟ್ಟುಹಾಕುವ ಮತ್ತು ಬುಡಮಟ್ಟದ ಬದಲಾವಣೆ ತರುವ ಏಕೈಕ ಗುರಿ

ನಮ್ಮದು. ಎಂದು ಕನಸಿ ಹೊರಟ ಮಾರ್ಕ್ಸ್‌ವಾದಿ ಮತ್ತು ಲೋಹಿಯಾವಾದಿ ಚಿಂತನೆ-ಸಂಘಟನೆಗಳು ಯಾಕೀ ಸ್ಥಿತಿ ತಲುಪಿದವು! ಕ್ರಾಂತಿಯನ್ನು ಸೋವಿಯತ್ ರಷ್ಯಾ ಅಥವಾ ಚೀನದಿಂದ ಹೊರಸಿಕೊಂಡು ತರಲಾಗುವುದಿಲ್ಲ; ಎಂಬ ಒಂದು ಸಣ್ಣ ಸಾಮಾನ್ಯ ತಿಳುವಳಿಕೆ ಕಮ್ಯೂನಿಸ್ಟರಿಗಿರಲಿಲ್ಲ: ಉಳುವವನೇ ನೆಲದೊಡಯ ಎಂಬುದು ಒಂದು ಸಮಾಜವಾದಿ ಕಾರ್ಯಕ್ರಮ, ಜನತೆ ಸಮಾಜವಾದೀ ಸಂಘಟನೆ ಕಡೆಗೆ ಒಲಿಯದಂತೆ ತಡೆಯುವ ಹುನ್ನಾರಿನಿಂದ ಕಾಂಗ್ರೆ ಆ ಕಾರ್ಯಕ್ರಮವನ್ನು ಕದೀತಿದೆ; ಇಂದಿರಾ ಗಾಂಧಿಯ ಬ್ಯಾಂಕ್ ರಾಷ್ಟ್ರೀಕರಣ ಅಂತಾದ್ದೇ ಒಂದು ದಗಲ್‌ಬಾಜಿ ಕೆಲಸ—ಎಂಬಿತ್ಯಾದಿ ಜಾಣ ರಾಜಕೀಯ ಚಮತ್ಕಾರಗಳ ಪ್ರಾಥಮಿಕ ಅರಿವು ಲೋಹಿಯಾವಾದಿಗಳಿಗೆ ಬರಲಿಲ್ಲ ಎಂದರೆ ನಂಬುವುದು ಸಾಧ್ಯವೆ? ಮಾರ್ಕ್ಸ್‌ವಾದ ಲೋಹಿಯಾವಾದ ಮಾತನಾಡುವ ಜನ; ಬೇರೊಂದು ರೂಪದಲ್ಲಿ ಇಂದಿರಾ ಗಾಂಧಿಯಷ್ಟೇ ಪ್ರತಿಗಾಮಿಗಳಾದ ಹಳೇ ಕಾಂಗ್ರೆಸ್ ಮಂದಿ ಜತೆಗೂಡಬೇಕಾದ ಅನಿವಾರ್ಯ (ದುರಂತ) ಏಕೆ ಉಂಟಾಯಿತು!

*     *     *

ವೇದ ಕೇಳಿದ ಶೂದ್ರರ ಕಿವಿಗೆ ಕುದಿ ಸೀಸ ಹುಯ್ಯಬೇಕು ಎಂಬಿತ್ಯಾದಿ ಕಟ್ಟಳೆಗಳನ್ನು ಧರ್ಮದ ಹೆಸರಲ್ಲಿ ಚಾಲೂ ಮಾಡಲೂ; ನಾವು ಮಾತ್ರ ಜ್ಞಾನಿಗಳು ಮತ್ತು ಸಂಸ್ಕೃತರು ಎಂದು ಬ್ರಾಹ್ಮಣರು ಸಾಗುಹಾಕಿಕೊಳ್ಳಲು: ಶೂದ್ರರು ಅಕ್ಷರ ಕಲಿತರೆ ಎಲ್ಲಿ ತಮ್ಮ ಸ್ಥಾನಕ್ಕೆ ದಕ್ಕೆ ಬರುತ್ತದೆಯೋ ಎಂಬ ಅಭದ್ರತೆಯ ಭೀತಿ ಮತ್ತು ಆತ್ಮವಿಶ್ವಾಸದ ಅಭಾವವೇ ಬಹು ಪಾಲು ಕಾರಣ. ಆತ್ಮವಿಶ್ವಾಸವಿದ್ದ ಜನರು ಹಾಂಗೆ ಎಂದು ವರ್ತಿಸೋದಿಲ್ಲ.

ಎಲ್ಲರೂ ಸಹಜ ಇದ್ದ ಸಮಾಜ. ಆ ಒಳಗಿಂದ ಎಂದೋ ಒಂದು ದಿನ ವ್ಯಾಸ ಹುಟ್ಟಿದ (ಕುಪ್ಪಳ್ಳಿಯಲ್ಲಿ ಪುಟ್ಟಪ್ಪ ಕಾಣಿಸಿಕೊಂಡ ಹಾಗೆ) ಪ್ರತಿಭೆ ಕಾರಣ ವ್ಯಾಸನಿಗೆ ಏನೋ ಒಂದು ತರಹದ ವಿಶೇಷ ಸ್ಥಾನಮಾನ ದೊರಕಿತು. ಆ ವ್ಯಾಸನಿಗೂ ಹೆಂಡತಿಮಕ್ಕಳು, ಬಂಧು-ಬಳಗ ಇದ್ದರು. ಅವರ್ಯಾರು ಪ್ರತಿಭಾವಂತರಾಗಿರಲಿಲ್ಲ. ಆದರೆ ಭಲೇ ಪಾಕಡುಗಳು ಮಕ್ಕಳು ಅಥವಾ ಸಂಬಂಧಿಕರಾದಿದ್ದ ಕಾರಣ ವ್ಯಾಸನಿಗೆ ದೊರೆತಿದ್ದ ಸ್ಥಾನಮಾನದ ರುಚಿ ಉಂಡಿದ್ದ ಅವರು, ಆ ಸವಲತ್ತನ್ನು ಬಿಟ್ಟುಕೊಡಲು ತಯಾರಿರಲಿಲ್ಲ. ಆದ್ದರಿಂದ ಏನು ಮಾಡಿದರು, ವ್ಯಾಸನ ಮಕ್ಕಳು ಅಥವಾ ಸಂಬಂಧಿಕರು ಎಂಬುದನ್ನೇ ಬದುಕಿನ ಬಂಡವಾಳ ಮಾಡಿಕೊಂಡರು (ದೇ. ಜವರೇಗೌಡ, ಹಾ. ಮಾ. ನಾಯಕ ಮೊದಲಾದ ಮಹಾಜನತೆ ಕುವೆಂಪುಗೆ ಗಂಟು ಬಿದ್ದಂತೆ) ವ್ಯಾಸ ಮಹರ್ಷಿಯೂ ಆದ (ಕುವೆಂಪು ಋಷಿ ಎನ್ನುವಂತೆ). ವ್ಯಾಸನ ಮಕ್ಕಳು ಅಥವಾ ಸಂಬಂಧಿಕರು ಋಷಿವಂಶಸ್ಥರಾದರು. ಆದಕ್ಕೆ ವ್ಯಾಸನ ಕುಮ್ಮಕ್ಕೂ

ಇದ್ದಿರಬಹುದು. ತಲೆಮಾರುಗಳ ಅಂತರದಲ್ಲಿ ಬ್ರಾಹ್ಮಣ ಜಾತಿ ಹುಟ್ಟಿಕೊಂಡಿತು: ಮತ್ತೊಬ್ಬ ವ್ಯಾಸ ಬರದಂತೆ ನೋಡಿಕೊಳ್ಳುವುದು ಮತ್ತು ತಮಗೆ ದಕ್ಕಿದ ಪ್ರತಿಷ್ಠೆ ಕೈತಪ್ಪಿಹೋಗದಂತೆ ಕಾಯ್ದುಕೊಳ್ಳುವುದೇ ಅವರ ದಂದೆಯಾಯಿತು. ನಾವು ವ್ಯಾಸನಂತೆ ಪ್ರತಿಭಾವಂತರಲ್ಲ, ಎಲ್ಲಾ ಕಾಲದಲ್ಲೂ ಅಂತಹ ಜನ ಬರುವುದಿಲ್ಲ ಮತ್ತು ದಿನನಿತ್ಯದ ಪರಿಪಾಟಲುಗಳಿಗೆ ವ್ಯಾಸನಂತೋರ ಅಗತ್ಯವೂ ಇಲ್ಲ: ಎಂಬ ಸಾಮಾನ್ಯ ತಿಳುವಳಿಕೆಯಿಂದ ಬಂದ ಸಾಮರ್ಥ್ಯದ ಮಿತಿಯ ಅರಿವು ಮತ್ತು ದೌರ್ಬಲ್ಯವನ್ನೇ ಬ್ರಾಹ್ಮಣರು ಜೀವನ ವಿಧಾನ ಮತ್ತು ಕ್ರಿಯಾಶಕ್ತಿಯಾಗಿ ರೂಢಿಸಿಕೊಂಡರು. ಜಗತ್ತಿನ ಇತಿಹಾಸದಲ್ಲಿ ಇದೊಂದು ಅದ್ಭುತ ಘಟನೆ.

ಆತ್ಮವಿಶ್ವಾಸದ ಅಭಾವ, ಅಭದ್ರತೆಯ ಭೀತಿ ಮತ್ತು ಇವುಗಳ ಬೆನ್ನಿಗಂಟಿದಂತೆ ಬರುವ ಪಾಪ-ಪುಣ್ಯಗಳ ಸಂಮಿಶ್ರಣ: ಗುಪ್ತವಾಗಿ ಅಡಗಿ ಕೆಲಸ ಮಾಡುವುದನ್ನು ಬ್ರಾಹ್ಮಣನ ಕಣ್ಣಲ್ಲಿ ಈವತ್ತಿಗೂ ಕಾಣಬಹುದು. ವಲ್ಲಭಭಾಯಿ ಪಟೇಲ್, ರಾಮಮನೋಹರ ಲೋಹಿಯಾ ಮತ್ತು ಬಿ. ಆರ್. ಅಂಬೇಡ್ಕರ್ ಎದುರೂ ನೆಹರೂ ಮನುಷ್ಯನಂತೆ ವರ್ತಿಸಲಾಗದೇ ಹೋದುದಕ್ಕೆ, ಆತ್ಮವಿಶ್ವಾಸದ ಅಭಾವವೇ ಕಾರಣವಾಗಿತ್ತು. ಜಯಪ್ರಕಾಶ್ ನಾರಾಯಣ್ ಎದುರು ನಾನು ತೀರ ಕುಬ್ಜ ಎಂದು ಗೊತ್ತಾದಾಗ: ತೀವ್ರ ರೂಪದಲ್ಲಿ ಎದುರಾದ ಅಭದ್ರತೆಯ ಭೀತಿಯ ಜ್ವರವನ್ನೇ ಶಕ್ತಿಯನ್ನಾಗಿ ಪರಿವರ್ತಿಸಿಕೊಳ್ಳಲು ಇಂದಿರಾ ಗಾಂಧಿ ತುರ್ತು ಪರಿಸ್ಥಿತಿ ಘೋಷಿಸಬೇಕಾಯಿತು. ಕೋಟಾ ಶಿವರಾಮ ಕಾರಂತರು ಆರೆಸ್ಸೆಸ್ ಸಮಾರಂಭಗಳಲ್ಲಿ ಭಾಗವಹಿಸಲು ಆರಂಭಿಸಿರೋದು ಡಾ. ಯು. ಆರ್. ಅನಂತ ಮೂರ್ತಿ ಪೇಜಾವರರಿಗೆ ಪತ್ರ ಬರೆದದ್ದು: ಸೃಜನಶಕ್ತಿ ಮುರುಟಿದ ನಂತರ ತಲೆ ಎತ್ತಿದ ಅಭದ್ರತೆಯ ಭೀತಿ ಕಾರಣವೇ. ಬಹುಪಾಲು ಬ್ರಾಹ್ಮಣರು ತಮ್ಮನ್ನು ತಾವೇ ಹರಾಜುಹಾಕಿಕೊಂಡ ಹಾಗೆ ಇಂಗ್ಲೀಷ್‌ಭಾಷೆಗೆ ಜೋತುಬೀಳುವುದು, ಪಾಶ್ಚಿಮಾತ್ಯ ಜನರ ಒಲವು ಗಳಿಸಲು ಹಾತೊರೆಯುವುದು ಮತ್ತು ಅಂತರಾಷ್ಟ್ರೀಯ ಖ್ಯಾತಿಗಾಗಿ ಹಂಬಲಿಸೋದು: ಆ ತರದಿಂದಲಾದರೂ ನಾವು ಮೇಲ್ಜಾತಿ ಶೂದ್ರರಿಗಿಂತ ಮೇಲೆ ಎಂದು ತೋರಿಸಿಕೊಂಡಾದರೂ ಅಭದ್ರತೆಯ ಭೀತಿಯನ್ನು ಗೆಲ್ಲಲು ನಡೆಸುವ ಪ್ರಯತ್ನಗಳೇ ಆಗಿವೆ.

ಅಂತಹ ಜನ ಶೇಕಡ ನಾಲ್ಕೈದು ಭಾಗ ಮಾತ್ರವೇ ಆಗಿದ್ದಲ್ಲಿ, ಬ್ರಾಹ್ಮಣಿಕೆ ಎಷ್ಟೋ ಶತಮಾನಗಳ ಹಿಂದೆಯೇ ಕುಸಿದು ಪುಡಿಪುಡಿಯಾಗಿ ಬಿಡಬೇಕಿತ್ತು. ಆದರೆ ಪರಿಸ್ಥಿತಿ ಹಾಗಿಲ್ಲ. ನಮ್ಮ ಅಪ್ಪ ಸಂಸ್ಕೃತ ಘನ ಪಂಡಿತ ಎಂಬ ಹೇಳಿಕೆಯನ್ನೇ ಬಂಡವಾಳ ಮಾಡಿಕೊಂಡು, ಬದುಕು ಚಾಲೂ ಮಾಡುವವನಂತೆಯೇ: ಅಪ್ಪ

ಸಂಪಾದಿಸಿದ ನೂರಾರು ಎಕರೆ ಆಸ್ತಿ ಇದೆ ಎಂದು ಬೀಗುವವನೂ ಬ್ರಾಹ್ಮಣನಾಗಿ ಬಿಡುತ್ತಾನೆ. ಸೂರ್ಯನಂತಹ ಅಕ್ಷರ ಕೆಲವರ ಆಸ್ತಿಯಾದರೆ, ಯಾರಿಗೂ ಸಲ್ಲದ ಅಥವಾ ಎಲ್ಲರಿಗೂ ಸಲ್ಲುವ ಭೂತಾಯಿಯ ಒಂದು ತುಣುಕು ಕೆಲವರ ಪಾಲಿಗೆ ಆಸ್ತಿಯಾಗಿಬಿಡುತ್ತದೆ. ಹಲವರಿಗೆ ತಕ್ಕಡಿಯೇ ಆಸ್ತಿ ಆದಂತೆ. ಆ ಆಸ್ತಿ ಮೇಲಿನ ವಿಪರೀತದ ವ್ಯಾಜ್ಯದಿಂದಾಗಿ ಅಭದ್ರತೆಯು ಭೀತಿ ಎಂಬುದು: ಯಾವುದೋ ಒಂದ ಪ್ರಮಾಣದಲ್ಲಿ, ಜಮೀನು ಎಲ್ಲಿ ಕೈ ತಪ್ಪಿ ಹೋಗುತ್ತದೋ ಎಂಬ ಆತಂಕದ ರೂಪದಲ್ಲಿ. ಮೇಲ್ಜಾತಿ ಶೂದ್ರರಲ್ಲೂ ಅಡಗಿ ಕುಂತಿರುತ್ತದೆ.

ಹಾಗಾಗಿ ಬ್ರಾಹ್ಮಣನನ್ನು ಬೆನ್ನ ಮೇಲೆ ಹೊತ್ತವನೇ ಈ ಮೇಲ್ಜಾತಿ ಶೂದ್ರ ಪುಗಸಟ್ಟೆ ಅಲ್ಲ. ಮೌರ್ಯರು-ಗಂಗರು ಎಲ್ಲಾ ನಮ್ಮೋರು. ಈ ದೇಶ ಆಳಿದ್ದೇ ನಾವು. ಬ್ರಾಹ್ಮಣ ಪೂಜಿಸುವ ರಾಮಕೃಷ್ಣ ಎಲ್ಲಾ ನಮ್ಮ ಜಾತಿಯೋರು. ಇತ್ಯಾದಿ ಹಮ್ಮು ಮೇಲ್ಜಾತಿ ಶೂದ್ರನದು. ಅಂತಹ ಮೇಲ್ಜಾತಿ ಶೂದ್ರನ ಪಾಳೆಗಾರಿಕೆಗೆ ಧರ್ಮದ ಮುದ್ರೆ ಒತ್ತಿದವನು ಬ್ರಾಹ್ಮಣ. ಇದನ್ನು ಒಟ್ಟಾರೆ 'ಪುರೋಹಿತ ಪಾಳೇಗಿರಿ ಜಂಟಿ ಕಂಪನಿ' ಎಂದು ಕರೆಯಬಹುದು.

* * *

ಅರಿವಿಗಾಗಿ ಶಿಕ್ಷಣ, ಮಾನವನ ಬದುಕು ಹಸನಾಗಲು ಶಿಕ್ಷಣ: ಎಂಬುದು ಸರ್ವೇಸಾಮಾನ್ಯವಾಗಿ ಪುಸ್ತಕಗಳಲ್ಲಿ ಕಂಡುಬರುವ ಮಾತು. ಆದರೆ ವಾಸ್ತವ ಜಗತ್ತಿನಲ್ಲಿ ಶಿಕ್ಷಣವು ಸುಲಿಗೆಗೆ ಬಹಳ ನೇರ್ಪಾದ ಹಾದಿ—ಬಹಳ ಓದಿ ಅಣು ತಂತ್ರಜ್ಞಾನಿ ಆದವ: ಬಹಳ ನಯವಾಗಿ ಸಾಮೂಹಿಕ ಕಗ್ಗೊಲೆ ಮಾಡಬಹುದಾದ ಸಾಧನಗಳನ್ನು ರೂಪಿಸಬಹುದಾದಂತೆ; ಅಕ್ಷರ ಬಲದಿಂದ ದೇವರು, ಧರ್ಮ ಇತ್ಯಾದಿಗಳನ್ನು ತನ್ನ ಕಂಕುಳಲ್ಲಿಟ್ಟುಕೊಂಡ ಬ್ರಾಹ್ಮಣ ಮೇಲ್ಜಾತಿ ಶೂದ್ರನಿಗೆ ಕೈಕೊಟ್ಟು ಮುಂದೆ ಸಾಗಿದ. ಆಸ್ತಿ ಆಸೆಗಾಗಿ ಬ್ರಾಹ್ಮಣನಿಗೆ ಬೆನ್ನು ನೀಡಲು ಹೋಗಿ ಕೊನೆಗೆ ತಲೆಯನ್ನೇ ದಿವಾಳಿ ಮಾಡಿಕೊಂಡದ್ದು, ಮೇಲ್ಜಾತಿ ಶೂದ್ರನ ಬಹುದೊಡ್ಡ ಸಾಧನೆ. ವಿಶ್ವಾಮಿತ್ರನ ಕತೆ ಈ ಪ್ರಸಂಗವನ್ನು ಬಹಳ ರೋಚಕವಾಗಿ ಹೇಳುತ್ತದೆ. ಹಾಗಾಗಿ ಮೇಲ್ಜಾತಿ ಶೂದ್ರ ಸಮುದಾಯವು ಅಕ್ಷರ ಕಲಿಯಲು, 20ನೇ ಶತಮಾನದಲ್ಲಿ ಹೋರಾಡಬೇಕಾದ ವಿಷಮ ಪರಿಸ್ಥಿತಿ ಉಂಟಾಯಿತು.

ಪುರೋಹಿತಶಾಹಿಗೆ ಸಂಪೂರ್ಣ ಒಳಗಿನವನು ಬ್ರಾಹ್ಮಣನಾದರೆ, ಸಂಪೂರ್ಣ ಹೊರಗಿನವನು ಕೆಳಜಾತಿ ಶೂದ್ರ: ಆದರೆ ಮೇಲ್ಜಾತಿ ಶೂದ್ರ ಅರ್ಧ ಒಳಗೆ ಅರ್ಧ ಹೊರಗೆ ಎಡಬಿಡಂಗಿ ಸ್ಥಿತಿಯಲ್ಲಿರುವ ಅವನು; ಸಂಪೂರ್ಣ ಒಳಹೋಗಲು ಹೋರಾಡುತ್ತಿರುತ್ತಾನೆ ವಿನಃ ಸಂಪೂರ್ಣ ಹೊರಬರಲು ಅಲ್ಲ. ಕುವೆಂಪು ಒಳ್ಳೇ

ಉದಾಹರಣೆ. ಮೇಲ್ಜಾತಿ ಶೂದ್ರ ಅಕ್ಷರ ಕಲಿತದ್ದು ಬ್ರಾಹ್ಮಣ ಸಾರಸಗಟಾಗಿ ಅನುಭವಿಸುತ್ತಿದ್ದ ಸವಲತ್ತುಗಳ ಪಾಲು ಮಾಡಿಕೊಳ್ಳಲು ಅದು ವಿನಃ ಅದನ್ನ ಬುಡಮಟ್ಟ ಬದಲಾಯಿಸಬೇಕೆಂಬ ರೊಚ್ಚಿನಿಂದಲ್ಲ. ಇದರರ್ಥ ಅವನೆಂದೂ ಮೂಲ ಭೂತವಾಗಿ ಯೋಚಿಸಿದ್ದೇ ಇಲ್ಲ, ಹಾಗಾಗಿ ವ್ಯವಸ್ಥೆ ಅವನ್ನು ಬದಲಾಯಿಸುತ್ತದೆ. ಅವನಿಂದ ವ್ಯವಸ್ಥೆಯನ್ನು ಕಿಂಚಿತ್ತಾದರೂ ಬದಲಾಯಿಸುವುದಿಲ್ಲ. ಶಾಲಾ ಕಾಲೇಜು ಅಂದರ ಶೂದ್ರರ ಹೈಕಳ ಪಾಲಿಗೆ, ನರಕದ ಶಿಬಿರಗಳಾಗುವುದು ಈ ಕಾರಣಕ್ಕಾಗಿಯೇ!

ಇಡೀ ವ್ಯವಸ್ಥೆಯನ್ನು ತಲೆಕೆಳಗು ಮಾಡಿದಂತೆ ಬದಲಾಯಿಸುವುದು ಮೇಲ್ಜಾತಿ ಶೂದ್ರ ಮಹಾಶಯನಿಗೆ ಬೇಕೂ ಇರುವುದಿಲ್ಲ. ಗಾಯತ್ರಿ ಮಂತ್ರ ಕೊಟ್ಟವರೇ ನಾವು ನಮ್ಮ ವಿಶ್ವಾಮಿತ್ರ: ಬ್ರಾಹ್ಮಣರು ಕುತಂತ್ರದಿಂದ ಕೈತಪ್ಪಿ ಹೋಗಿದ್ದ ಆ ಪ್ರಾಂತ್ಯವನ್ನು ಮತ್ತೆ ಜಯಿಸುತ್ತಿದ್ದೇವೆ; ಎಂಬ ನಂಬಿಕೆಯಿಟ್ಟುಕೊಂಡೇ, ಅವನು ಶಿಕ್ಷಣ ಕ್ಷೇತ್ರ ಪ್ರವೇಶಿಸುತ್ತಾನೆ. ಅಂತಹ ಆತ ಬಯಸುವ ಬದಲಾವಣೆ ಬಹಳ ಮಿತವಾದದ್ದು. ಇಡೀ ವ್ಯವಸ್ಥೆ ಹೇಗಿದೆಯೋ ಅಥವ ಬ್ರಾಹ್ಮಣನನ್ನು ತಳ್ಳಿ ತಾನು ಆ ಜಾಗದಲ್ಲಿ ಕೂಡಬೇಕು. ತಾನು ಹಾಗೆ ಇರಬೇಕು. ಆದರೆ ಬ್ರಾಹ್ಮಣ ತನಗೆ ಜಾಗ ಬಿಟ್ಟು ಕೊಡಬೇಕು. ತಾನು ಮಾತ್ರ ಕೆಳಜಾತಿ ಶೂದ್ರನಿಗೆ ಏನನ್ನೂ ಬಿಟ್ಟುಕೊಡಬಾರದು. ಕೆಳಜಾತಿ ಶೂದ್ರನಿಗೆ ತನ್ನ ಉಗುರ ಮೊನೆಯು ಮಣ್ಣನ್ನು ಕೊಡಲು ಮೇಲ್ಜಾತಿ ಶೂದ್ರ ಸಿದ್ಧನಿರುವುದಿಲ್ಲ. ಹಾಗಾಗಿ ಮೇಲ್ಜಾತಿ ಶೂದ್ರ ಏಕಕಾಲದಲ್ಲಿ ಪ್ರಗತಿ ಗಾಮಿಯೂ ಮತ್ತು ವಿರೋಧಿಯೂ ಆಗಿರುತ್ತಾನೆ. ಶೈಕ್ಷಣಿಕ ನ್ಯಾಯಕ್ಕಾಗಿ ಬ್ರಾಹ್ಮಣರ ವಿರುದ್ಧ ಹೋರಾಡುವಾಗ ಪ್ರಗತಿಪಾಹಕರಾಗಿ ಕಾಣಿಸಿಕೊಳ್ಳುವ ಮೇಲ್ಜಾತಿ ಶೂದ್ರರು: ಕೇವಲ ನಾಲ್ಕಾಣೆ ಕೂಲಿ ಕೇಳುವ ಕೆಳಜಾತಿ ಶೂದ್ರರ ಕುತ್ತಿಗೆಗೆ ಬಂದೂಕಿನ ರುಚಿ ತೋರಿಸಲು ಹಿಂಜರಿಯುವುದಿಲ್ಲ!

ಹಾಗಾಗಿ ಪದವಿ ಪಡೆಯೋದು ಅಂದರೆ ಮೇಲ್ಜಾತಿ ಶೂದ್ರನಿಗೆ, ಇನ್ನೊಂದೆ ಕರೆಗದ್ದೆ ಸಂಪಾದನೆ ಮಾಡಿದಂತಾಗಿ ಬಿಡುತ್ತದೆ. ಪಾಳೇಗಾರಿಕೆ ಮತ್ತು ಬ್ರಾಹ್ಮಣನ ಹಿಕ್ಮತ್ತು; ಕಲಿತ ಮೇಲ್ಜಾತಿ ಶೂದ್ರನಲ್ಲೇ ಎರಕಗೊಳ್ಳುತ್ತಾನೆ, ಇಂತಹ ಹೊಸ ದೊಂದು ಸುಧಾರಿಸಿದ ತಳಿಯನ್ನು ಎಲ್ಲೆಲ್ಲೂ ಕಾಣಬಹುದಾಗಿದೆ. ಈ ಕಾರಣ ದಿಂದಾಗಿ ಕೆಳಜಾತಿ ಶೂದ್ರರ ಪಾಲಿಗೆ: ಅನಕ್ಷರಸ್ಥ ಪಾಳೇಗಾರನಿಗಿಂತ ಶೂದ್ರ ಬ್ರಾಹ್ಮಣ ಗರಡಿಯಲ್ಲಿ ತಯಾರಾದ ಮೇಲ್ಜಾತಿ ಶೂದ್ರ; ಡಬ್ಬಲ್ ಅಪಾಯ ಕಾರಿಯಾಗಿಬಿಡುವ ಸಂದರ್ಭಗಳು ಎದುರಾಗುತ್ತವೆ. 'ಬ್ರಾಹ್ಮಣಿಕೆ' ಕುರಿತು ಲೋಹಿಯಾ ಚಿಂತನೆ ಈ ಗಳಿಗೆಯಲ್ಲಿ ಮೇಲ್ಜಾತಿ ಶೂದ್ರರಿಗೆ, ಬಲು ಆಕರ್ಷಕ ವಾಗಿ ಕಾಣದಿರುತ್ತದೆಯೇ?

ಮೊದಲೇ ಅಭದ್ರತೆಯ ಭೀತಿಯಿಂದ ನರಳುತ್ತಿದ್ದ ಬ್ರಾಹ್ಮಣ: ಬದಲಾವಣೆ ಓಡಿದ ದಿಕ್ಕಿನ ವಾಸನೆ ಮೂಸಿದವನೆ, ಹಳ್ಳಿಬಿಟ್ಟು ನಗರಕ್ಕೆ ಪೇರಿ ಕೀಳ ಬೇಕಾಯಿತು. ಅಲ್ಲಿಗೆ ಪುರೋಹಿತಶಾಹಿ—ಪಾಳೇಗಿರಿ ಜಂಟಿ ಕಂಪನಿ ಮುರಿದು ಬಿತ್ತು. ಅದಕ್ಕೂ ತನಗೂ ಯಾವುದೇ ಸಂಬಂಧ ಇರಲಿಲ್ಲ ಎಂಬಂತೆ ಆನಂತರದಲ್ಲಿ ಬ್ರಾಹ್ಮಣ ಮಾತನಾಡತೊಡಗಿದ. ಮುಂದೆ ಮಾರ್ಕ್ಸ್‌ವಾದಿ ರೂಪದಲ್ಲಿ ಕಾಣಿಸಿ ಕೊಂಡೋನೆ ಇವನು.

*　　　　*　　　　*

ಈ ನಡುವೆ ಕೆಳಜಾತಿ ಶೂದ್ರರ ನಾಲಿಗೆ ನಾಗರಿಕತೆಯ ಮಾತುಗಳನಾಡ ತೊಡಗಿತು. ಅಷ್ಟರಲ್ಲಾಗಲೇ ಎರಡು ರೀತಿಯ ಬದಲಾವಣೆಗಳಾಗಿದ್ದವು. ಮೇಲ್ಜಾತಿ ಶೂದ್ರ ಚಳವಳಿ: ಬ್ರಾಹ್ಮಣರು ಸಾರಾಸಗಟಾಗಿ ಅನುಭವಿಸುತ್ತಿದ್ದ ಸರ್ಕಾರಿ ಸವಲತ್ತುಗಳ ಪಾಲುಮಾಡಿಕೊಳ್ಳುವಷ್ಟರಲ್ಲಿ ಪಟ್ಟಭದ್ರ ಹಿತಾಸಕ್ತಿಯಾಗಿ ಮಾರ್ಪಟ್ಟಿತು. ಇನ್ನೊಂದು ಕಡೆ ಬ್ರಾಹ್ಮಣ ಪರಿಸ್ಥಿತಿ: ಇತಿಹಾಸದುದ್ದಕ್ಕೂ ರಾಜಾ ಶ್ರಯದ ನೆರಳಲ್ಲಿ ಕುಂತುಂಡ ಜಾಣ ಅವ; ಪುರೋಹಿತಶಾಹಿ—ಪಾಳೇಗಿರಿ ಜಂಟಿ ಕಂಪನಿಯಲ್ಲಿದ್ದ ತನ್ನ ಷೇರುಗಳನ್ನು ಮುರಿದುಕೊಂಡು ನಗರಸೇರಿದ ನಂತರ–ಸರ್ಕಾರಿ ಉದ್ಯೋಗ ಜಾಲದ ನೆರಳಲ್ಲಿ ಅಂತಾದ್ದೇ ಮತ್ತೊಂದು ಆಶ್ರಯ ಕಂಡುಕೊಂಡಿದ್ದ.

ರಂಗದ ಮೇಲೆ ಕೆಳಜಾತಿ ಶೂದ್ರನ ಆಗಮನ ಆಗುತ್ತಿರುವುದನ್ನು ನೋಡಿ: ಮೇಲ್ಜಾತಿ ಶೂದ್ರನಿಗೆ ತಾವು ನಿಂತ ನೆಲವೇ ಕುಸಿಯುತ್ತಿರುವಂತೆ ಕಾಣಿಸಿದರೆ; ಬ್ರಾಹ್ಮಣರಿಗೆ ಆಕಾಶವೇ ಮಾಯವಾದಂತೆ ಕನಸುಗಳು ಬೀಳತೊಡಗುತ್ತವೆ. ಜಮೀನು ಬಿಟ್ಟುಕೊಡಿ ಎಂದು ಒತ್ತಾಯಿಸುವ ಕೆಳಜಾತಿ ಶೂದ್ರ; ಈ ಕಡೆ ತಾನು ಬ್ರಾಹ್ಮಣರ ಕೈಯಿಂದ ಕಸಿದುಕೊಂಡಿರುವ ಶೈಕ್ಷಣಿಕ ಸವಲತ್ತಿನಲ್ಲೂ ಪಾಲು ಕೇಳಲು ಬರು ತ್ತಿದ್ದಾನಲ್ಲಾ ಎಂಬ ಆತಂಕ ಮೇಲ್ಜಾತಿ ಶೂದ್ರನಿಗುಂಟಾದರೆ: ಮೇಲ್ಜಾತಿ ಮತ್ತು ಕೆಳಜಾತಿ ಶೂದ್ರರಿಬ್ಬರು ಎರಡೂ ಕಡೆಯಿಂದ ತನ್ನ ಭದ್ರ ಕೋಟೆಗೆ ಲಗ್ಗೆ ಹಾಕು ತ್ತಿದ್ದಾರೆ ಎಂಬ ಭೀತಿಯಿಂದ ಬ್ರಾಹ್ಮಣ ನರಳತೊಡಗುತ್ತಾನೆ. ಈಗ ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರರಿಬ್ಬರೂ ಸಮಾನ ದುಃಖಿಗಳು. ಎಲ್ಲಿ ಮೇಲ್ಜಾತಿ ಮತ್ತು ಕೆಳಜಾತಿ ಶೂದ್ರರಿಬ್ಬರು ಒಂದಾಗಿಬಿಡುತ್ತಾರೋ ಎಂದು ಹೆದರಿ ಬ್ರಾಹ್ಮಣ ಅರೆಬ್ರಾಹ್ಮಣನಾದ ಮೇಲ್ಜಾತಿ ಶೂದ್ರನ ಕೈ ಕುಲುಕುತ್ತಾನೆ. ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರ ಒಂದಾಗುತ್ತಾ ಹೋದಂತೆಲ್ಲ ಬ್ರಾಹ್ಮಣ ಎಂಬ ಜಾತಿ, ಬ್ರಾಹ್ಮಣ ವರ್ಗವಾಗಿಯೂ ರೂಪುಗೊಳ್ಳುತ್ತಾ ಹೋಗುತ್ತದೆ. ಪುರೋಹಿತಶಾಹಿ ಪಾಳೇಗಿರಿ ಜಂಟಿ ಕಂಪನಿ ಇತಿಹಾಸದ ಗಳಿಯಲ್ಲಿ ಹೂತುಹೋಯಿತು. ನಿಜ

ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರ ಕೆಲವು ವಿಚಾರಗಳಲ್ಲಿಯಾದರೂ ಪಾಲಿಲ್ಲಾಗುವುದನ್ನು ನೋಡಿದರೆ: ಬ್ರಾಹ್ಮಣ ವರ್ಗಗಳ ಒಕ್ಕೂಟ ಎಂಬುದು, ಚಾಲ್ತಿಯಲ್ಲಿರುವ ಹಾಗೆ ತೋರಿಬರುತ್ತದೆ.

ಒಂದು ಸಣ್ಣ ಉದಾಹರಣೆ: ಕೆಳಜಾತಿ ಶೂದ್ರನಿಗೆ ಸೇರಿದ ಶೂದ್ರನೊಬ್ಬ ಎಲ್ಲಿ ಮುಖ್ಯಮಂತ್ರಿ ಆಗಿಬಿಡುತ್ತಾನೋ ಎಂಬ ಭೀತಿಯಿಂದ, ತೊಳ್ಳೆ ನಡುಗಿ ಹತ್ತಿದ ಒಕ್ಕಲಿಗ ಮತ್ತು ಲಿಂಗಾಯಿತ ಮೇಲ್ಜಾತಿ ಶೂದ್ರರು ಬ್ರಾಹ್ಮಣರ ಜತೆ ಒಟ್ಟಾದರು. ಆ ಲಾಭ ಆದದ್ದು ರಾಮಕೃಷ್ಣ ಹೆಗ್ಡೆಗೆ. ಜಗಜೀವನ ರಾಂ ಪ್ರಧಾನಿ ಆಗದಂತೆ ತಡೆದವರು ಚರಣ್‌ಸಿಂಗ್. ಸಂಜೀವರೆಡ್ಡಿ ಹಿಂದಿದ್ದ ಮೇಲ್ಜಾತಿ ಶೂದ್ರರು ಬ್ರಾಹ್ಮಣನನ್ನಾದರೂ ಸಹಿಸಿಕೊಂಡಾರು. ಆದರೆ ಯಾವುದೇ ಕಾರಣಕ್ಕಾಗಿಯಾದರೂ ಕೆಳಜಾತಿ ಶೂದ್ರನನ್ನು ಸಹಿಸಿಕೊಳ್ಳಲಾಗದ ಒಂದು ತರಹದ ಮಾನಸಿಕ ರೋಗ, ಮೇಲ್ಜಾತಿ ಶೂದ್ರರಿಗೆ ಬಡಿದಿದೆ. ಅದನ್ನು ಬಳಸಿಕೊಂಡು ಇಂದಿರಾ ಗಾಂಧಿ ಮತ್ತೆ ಗದ್ದುಗೆ ಏರಿದಳು. ಈವತ್ತಿನವರೆಗೂ ಎಲ್ಲಾ ರಂಗಗಳಲ್ಲೂ ಬ್ರಾಹ್ಮಣರು ಬಿಡ್ಡಿಗೊಡ್ಡಿ ವಿರಾಜಮಾನರಾಗಿರುವುದು: ಶೂದ್ರರ ಸಾಧನೆ ಉಲ್ಕೆಗಳ ರೂಪದಲ್ಲಿ ಅಲ್ಲೊಂದು ಇಲ್ಲೊಂದು ಕಾಣಿಸಿಕೊಳ್ಳುವುದು ಮತ್ತು ಶಾಲೆ ಕಲಿತ ಪ್ರತಿಯೊಬ್ಬ ಬ್ರಾಹ್ಮಣೇತರನೂ ನವಬ್ರಾಹ್ಮಣನಂತೆ ಕಾಣಿಸಿಕೊಳ್ಳಬೇಕಿರುವುದು—ಇತ್ಯಾದಿ ರೋಗಗಳ ಮೂಲ ಇಲ್ಲಿ ಅಡಗಿದೆ.

ಇಂತಹ ಪ್ರತಿಕ್ರಿಯೆಯನ್ನೇ ವಿಲ್‌ಡೇರ್, ಬ್ರಾಹ್ಮಣ ಮತ್ತು ಕ್ಷತ್ರಿಯ ಘರ್ಷಣೆ ಎಂದು ಗುರುತಿಸಿದ್ದು. ಬೌದ್ಧಧರ್ಮ ಭಾರತದಿಂದ ಓಡಿ ಹೋಗಲು ಬ್ರಾಹ್ಮಣರು ಪ್ರಬುದ್ಧರಾಗಿದ್ದುದು ಕಾರಣವಲ್ಲ: ಮೇಲ್ಜಾತಿ ಶೂದ್ರರು ಸೇರಿದಂತೆ ಬ್ರಹ್ಮಣ ವರ್ಗ ಹುಟ್ಟಿಕೊಂಡಿದ್ದು ಕಾರಣ; ಎಂದು ವಿಲ್‌ಡುರ್ ನಿರೂಪಿಸುತ್ತಾನೆ. ಹಾಗೆಂದರೆ, ಮೇಲ್ಜಾತಿ ಶೂದ್ರರು ಬ್ರಾಹ್ಮಣ ವ್ಯವಸ್ಥೆಯನ್ನು ಒಪ್ಪಿಕೊಂಡದ್ದು ಅಥವ ಬ್ರಾಹ್ಮಣ ಮನಃಸ್ಥಿತಿಗೆ ಮತಾಂತರಗೊಂಡದ್ದು ಎಂದರ್ಥ. ಅಂತಹ ಮತಾಂತರ ಇತಿಹಾಸದುದ್ದಕ್ಕೂ ನಡೆಯುತ್ತಲೇ ಬಂದಿದೆ.

ಅತ್ಯಂತ ಮಾನವೀಯವೂ ಮತ್ತು ಸುಂದರವೂ ಆದ ಜೀವನ ವಿಧಾನ ಮತ್ತು ಬದುಕಿನ ಕಲ್ಪನೆ ನೀಡಿದವನು ಬುದ್ಧ. ಬ್ರಾಹ್ಮಣರ ರಾಜಷಾಹಿ, ಅಸಮಾನತೆಯ ಮೇಲೆ ನಿಂತ ವ್ಯವಸ್ಥೆಯ ಪ್ರತಿಪಾದಕರು. ಆದರೆ ಬುದ್ಧ ನ್ಯಾಯ, ಸಮತೆ, ಗಣತಂತ್ರ, ವ್ಯಕ್ತಿ-ಸ್ವಾತಂತ್ರ್ಯ ಆದರಿಸಿದ ಸಾಮಾಜಿಕ–ರಾಜಕೀಯ ಆಧ್ಯಾತ್ಮಿಕ ಕನಸು ಹಚ್ಚಿದವನು. ಕೆಳಜಾತಿ ಶೂದ್ರರು ತಮ್ಮಂತೆಯೇ ಮನುಷ್ಯರು ಎಂದು ಒಪ್ಪಿಕೊಳ್ಳಲು ನಿರಾಕರಿಸಿದ ಮೇಲ್ಜಾತಿ ಶೂದ್ರರು: 'ಮಾನವ ಜಾತಿ ಒಂದೇ ವಲಂ' ಎಂದು ಹೇಳುವ ಬೌದ್ಧಧರ್ಮವನ್ನು ಭಾರತದಿಂದ ಕುಲಗೆಡಿಸಿ ಓಡಿಸಲು, ಬ್ರಾಹ್ಮಣ

ಜತೆ ಸರೀಕರಾದರೆಂದು ತೋರುತ್ತದೆ. ಬಂಧ್ಧನ ಜತೆ ಹೋಲಿಸಿದರೆ ಅರೆ ತಿಳಿವಳಿಕೆಯ ಪಡ್ಡೆ ಹುಡುಗನಂತೆ ಕಾಣುವ ಶಂಕರಾಚಾರ್ಯ ಬೌದ್ಧಧರ್ಮ ಭಾರತದಿಂದ ಓಡಿಹೋಗಲು ನೆಪ ಮಾತ್ರದ ಕಾರಣವಾದ ಎಂಬ ಸಂಗತಿ: ಮೇಲ್ಜಾತಿ ಶೂದ್ರರು ಎಂತಾ ಹರಕು ಜನ ಎಂಬುದನ್ನು ಕಲೆಮಾಡಿ ಹೇಳುತ್ತದೆ. ಇದಕ್ಕಿಂತಲೂ ದುರಂತಪೂರ್ಣವಾದ ಘಟನೆ ಭಾರತದ ಇತಿಹಾಸದಲ್ಲಿ ಮತ್ತೊಂದಿರಲಾರದು.

* * *

ಮಾರ್ಕ್ಸ್‌ವಾದ, ಲೋಹಿಯಾವಾದ ಇತ್ಯಾದಿ ಮಾತನಾಡುವ ಜನರು ಬಹುಪಾಲು ಆ ಗುಂಪುಗಳಿಂದ ಬಂದವರೇ ಆಗಿದ್ದರು. ಅಕ್ಷರ ಅಪ್ಪನ ಮನೆ ಆಸ್ತಿ ಎಂದು ತಿಳಿದುಕೊಂಡಿದ್ದ ಬ್ರಾಹ್ಮಣರು ಮತ್ತು ಭೂಮಿ ಎಂಬುದು ತಮ್ಮನೆ ತೊತ್ತು ಎಂದು ಗರ್ವಪಡುತ್ತಿದ್ದ ಮೇಲ್ಜಾತಿ ಶೂದ್ರರು ಮಾತ್ರವೇ, ಮುಂಚಿತವಾಗಿ ಮಾರ್ಕ್ಸ್‌ವಾದ ಮತ್ತು ಲೋಹಿಯಾವಾದಗಳ ಕಡೆಗೆ ಆಕರ್ಷಿತರಾಗಲು ಪಾಪ ಪ್ರಜ್ಞೆಯು ಕಾರಣವಿರಬಹುದು. ನೀವು ಹೇಳುವಂತೆ ಕೆಳಜಾತಿ ಶೂದ್ರ ಸಮುದಾಯ ಯಾರನ್ನು ಕೊಂದಿಲ್ಲ. ಸುಲಿದು ತಿಂದಿಲ್ಲ. ಸುಲಿಗೆಗೊಳಗಾದವರಿಗಿಂತಲು ಹೆಚ್ಚಾಗಿ ಸುಲಿಗೆಮಾಡುವವರ ಹೊಟ್ಟೆಯಿಂದ ಬಂದ ಜನ, ಸುಲಿಗೆ ವ್ಯವಸ್ಥೆ ಬಗ್ಗೆ ರೋಸಿ ಹೋಗಿರುವ ಪ್ರಸಂಗಗಳು ಈ ಜಗತ್ತಿನಲ್ಲಿ ಕಾಣಸಿಕೊಂಡಿವೆ. ಆದರೆ ಅಂತಾದ್ದು ಬಹಳ ಅಪರೂಪ ಮಹರಾಯರೇ—ಇಲ್ಲದಿದ್ದಲ್ಲಿ ರಸ್ತೆಗೊಬ್ಬರು ಎಂಗಲ್ಸ್ ಎದುರಾಗಬೇಕಾಗುತ್ತಿತ್ತು!

ಈ ದೇಶದಲ್ಲಿ ಎಲ್ಲಾ ಪಕ್ಷಗಳು ಬ್ರಾಹ್ಮಣರ ಇಲ್ಲವೇ ಮೇಲ್ಜಾತಿ ಶೂದ್ರರ ಕೈಯಲ್ಲಿವೆ. ಅದರಲ್ಲಿ ವಿಶೇಷ ಏನೂ ಇಲ್ಲ. ಎಂದು ಕೆಲವರು ವಾದಿಸಬಹುದು. ಆ ಸಂಗತಿ ನಿಜವೂ ಹೌದು. ಆದರೆ ಆ ರೀತಿ ತರ್ಕದ ಮಾತನ್ನಾಡುವ ಜನ: ಮಾರ್ಕ್ಸ್ ಲೋಹಿಯಾವಾದಿ ಸಂಘಟನೆಗಳು ಮತ್ತು ಕಾಂಗ್ರೆಪಕ್ಷಗಳ ನಡುವೆ ಇರುವ; ಒಂದು ಮೂಲಭೂತ ಅಂತರವನ್ನಾದರೂ ಗಮನಕ್ಕೆ ತಂದುಕೊಂಡಂತೆ ಕಾಣುವುದಿಲ್ಲ. ಈಗ ಏನಾಗಿದೆಯೋ ಅದು ಸಹಜ ಸಂಗತಿ ಎಂದು ಸಮಾಧಾನ ತಂದುಕೊಳ್ಳುವ ಉದ್ದೇಶದಿಂದ ಆ ರೀತಿ ವಾದ ಹೂಡುತ್ತಾರೆ; ಎಂದು ತೋರುತ್ತದೆ. ಹೇಳಿ ಕೇಳಿ ಕಾಂಗ್ರೆ ಇರೋದು ಉಳ್ಳವರಿಗಾಗಿ. ಅಂತಹ ಪಕ್ಷ ಯಾರ ಕೈಲಿ ಇರಬೇಕೋ ಅವರ ಕೈಯಲ್ಲಿರುವುದು ಸಹಜ. ಆದರೆ ಕ್ರಾಂತಿ ಮತ್ತು ಬುಡಮಟ್ಟದ ಬದಲಾವಣೆಯ ಕನಸು ಕಾಣುವ ಮಾರ್ಕ್ಸ್‌ವಾದಿ ಮತ್ತು ಲೋಹಿಯಾವಾದಿ ಸಂಘಟನೆಗಳು;ಬ್ರಾಹ್ಮಣರ ಮತ್ತು ಮೇಲ್ಜಾತಿ ಶೂದ್ರರ ಹಚ್ಚಡದೊಳಗೆ ಮುದುರಿಕೊಂಡದ್ದು ಎಷ್ಟು ಸ್ವಾಭಾವಿಕ! ಮೊದಲು ಬ್ರಾಹ್ಮಣರಿಗೆ ಅನಂತರ ಮೇಲ್ಜಾತಿ ಶೂದ್ರರಿಗೆ ; ಬ್ರಿಟಿಷ್ ಶಿಕ್ಷಣ ಸಂಪರ್ಕ ದೊರೆತದ್ದು ಆ ರೀತಿಯ

ವಿಚಿತ್ರ ಬೆಳವಣಿಗೆಗೆ ಕಾರಣವಾಯಿತು; ಎಂದು ಕೆಲವರು ವಾದಿಸುತ್ತಾರೆ. ಆ ಸಮಜಾಯಿಷಿ ಮಾತಿನಲ್ಲಿ ಅರ್ಥ ಇರಬಹುದು. ಆದರೆ ಏನು ಮಾಡೋದು ಚೀನಾ ಕ್ರಾಂತಿ: ಆ ರೀತಿಯ ವಾದಗಳು ಸಂಪೂರ್ಣ ನಿಜವಲ್ಲ ಎಂದು ಹೇಳುವುದರಿಂದ ಕಾರಣಗಳನ್ನು ಬೇರೆ ಕಡೆ ಹುಡುಕ ಬೇಕಾಗುತ್ತದೆ.

ಉದಾಹರಣೆಗೆ, ಕೆಳಜಾತಿ ಶೂದ್ರ ಸಮುದಾಯದ ದುಸ್ಥಿತಿಗೆ ಕಾರಣಗಳು ಯಾವುದಿರಬಹುದು ಎಂಬ ಪ್ರಶ್ನೆ, ಅದು ತುಂಬ ಮೂಲಭೂತವಾದುದರಿಂದ, ಭಾರತದ ಸಮಸ್ಯೆಗಳನ್ನು ಬಗೆ ಹರಿಸಲು ಏನು ಕ್ರಮ ತೆಗೆದುಕೊಳ್ಳಬೇಕು, ಎಂದು ಕೇಳಿದಂತಾಗುತ್ತದೆ. ಆ ಪ್ರಶ್ನೆಗೆ ಅವರು ನೀಡುವ ಉತ್ತರಗಳನ್ನು ಹಿಡುವುದರಿಂದ: ಮಾರ್ಕ್ಸ್‌ವಾದಿಗಳು ಮತ್ತು ಲೋಹಿಯಾವಾದಿಗಳು ಅಂತರ್ಯದಲ್ಲಿ ಏನಾಗಿದಾರೆ ಎಂಬುದರ ದರ್ಶನ ಪಡೆದುಕೊಳಬಹುದು.

ಮಾರ್ಕ್ಸ್‌ವಾದಿಗಳು ಪಾಳೇಗಿರಿ ಮೇಲ್ಜಾತಿ ಶೂದ್ರನತ್ತ ಕೈ ತೋರಿಸಿದರೆ: ಲೋಹಿಯಾವಾದಿಗಳು ಪುರೋಹಿತಶಾಹಿ ಬ್ರಾಹ್ಮಣನ ಕಡೆಗೆ ಬೆರಳು ತೋರಿಸುತ್ತಾರೆ. ಹಳ್ಳಿಗಳಲ್ಲಿ ಕೇವಲ ಜೀತದಾಳುಗಳಾಗಿರುವ ಕೆಳಜಾತಿ ಶೂದ್ರರನ್ನು ಭೂಮಾಲೀಕ ರಾದ ಮೇಲ್ಜಾತಿ ಶೂದ್ರರು ಸುಲಿಗೆ ಮಾಡುತ್ತಾರೆ ಎಂದು ಹೇಳುವುದರ ಮೂಲಕ ಆರ್ಥಿಕ ಕಾರಣಗಳ ಮೇಲೆ ಮಾತ್ರವೇ ಒತ್ತು ಹಾಕುವ ಮಾರ್ಕ್ಸ್‌ವಾದಿ: ಸಾಂಸ್ಕೃತಿಕ ದಬ್ಬಾಳಿಕೆಯ ಪಟರಂಗವನ್ನು ಸಂಪೂರ್ಣ ನಿರ್ಲಕ್ಷಿಸುತ್ತಾನೆ. ಪುರೋಹಿತಶಾಹಿ ಬ್ರಾಹ್ಮಣ ಎಂದು ಹೇಳುವ ಲೋಹಿಯಾವಾದಿ; ಸುಲಿಗೆಯ ಸಾಂಸ್ಕೃತಿಕ ಮುಖಗಳ ಮೇಲೆ ಎಲ್ಲ ಭಾರವನ್ನು ಹೇರಿ, ಆರ್ಥಿಕ ಕಾರಣಗಳನ್ನು ತಳ್ಳಿಹಾಕಿಬಿಡುತ್ತಾನೆ. ಸುಲಿಗೆಗೆ ನಾವಿಬ್ಬರೂ ಕಾರಣ ಎಂಬುದು ಇಬ್ಬರಿಗೂ ಗೊತ್ತು—ಅಂದರೆ ಅವರಿಬ್ಬರಿಗೂ ಪ್ರತಿನಿಧಿಸುವ ಪುರೋಹಿತಶಾಹಿ ಮತ್ತು ಪಾಳೇ ಗಿರಿ ವ್ಯವಸ್ಥೆ, ಅದನ್ನು ಒಪ್ಪಿಕೊಳ್ಳಲು ಅವರಿಬ್ಬರೂ ಸುತರಾಂ ಸಿದ್ಧರಿಲ್ಲ. ಆ ಕಾರಣವೇ ಸಾಂಸ್ಕೃತಿಕ ಸುಲಿಗೆಯ ನೇತಾರನಾದ ಬ್ರಾಹ್ಮಣ, ಕೇವಲ ಆರ್ಥಿಕ ಅಂಶಗಳನ್ನು ಮಾತ್ರ ಪರಿಗಣಿಸಿದ್ದರೆ. ಆರ್ಥಿಕ ಸುಲಿಗೆಯ ಯಜಮಾನನಾದ ಮೇಲ್ಜಾತಿ ಶೂದ್ರ ಕೇವಲ ಸಾಂಸ್ಕೃತಿಕ ಅಂಶಗಳನ್ನು ಕುರಿತು ಮಾತನಾಡುತ್ತಿರು ತ್ತಾನೆ.

'ಪುರೋಹಿತಶಾಹಿ—ಪಾಳೇಗಿರಿ ಜಂಟಿ ಕಂಪನಿ' ಸಂಪರ್ಕ ಕಡಿದುಕೊಂಡು ನಗರ ಸೇರಿದ ಬ್ರಾಹ್ಮಣನಿಗೆ ಬೇಕಿದ್ದುದು ಆರ್ಥಿಕ ಬದಲಾವಣೆಯಾದರೆ: ಬ್ರಾಹ್ಮಣರ ಜತೆ ಜಿದ್ದಾಜಿದ್ದಿಗಿಳಿದ ಮೇಲ್ಜಾತಿ ಶೂದ್ರನಿಗೆ ಬೇಕಿದ್ದುದು ಒಂದು ಸಾಂಸ್ಕೃತಿಕ

ಆಂದೋಲನ–ಇದಕ್ಕೆ ಬ್ರಾಹ್ಮಣರು ಮಾರ್ಕ್ಸ್‌ವಾದಿಗಳಾದರು, ಮೇಲ್ಜಾತಿ ಶೂದ್ರರು ಲೋಹಿಯಾವಾದಿಗಳಾದರು. ಆರ್ಥಿಕ ಬದಲಾವಣೆ ಆದಾಗ ಎಲ್ಲ ಸರಿಹೋಗುತ್ತದೆ ಎಂದು ನಂಬಿಸುವ ಮಾರ್ಕ್ಸ್‌ವಾದ ಬ್ರಾಹ್ಮಣನ ಮನಸ್ಸಿಗೆ ಹೊಂದಿಕೆಯಾಯಿತು. 'ಬ್ರಾಹ್ಮಣಿಕೆ' ಕುರಿತ ಲೋಹಿಯಾಚಿಂತನೆ ಮೇಲ್ಜಾತಿ ಶೂದ್ರರ ಪಾಲಿಗೆ ಒಂದು ವರವಾಯಿತು. ಮಾರ್ಕ್ಸ್‌ವಾದ ಮತ್ತು ಲೋಹಿಯಾವಾದ ಅಂದರೆ ಇಷ್ಟು ಮಾತ್ರವಲ್ಲ. ಅವುಗಳ ಆಶಯ ಬಹಳ ಎತ್ತರವಾದದ್ದು. ಆದರೆ ಬ್ರಾಹ್ಮಣರು ಮತ್ತು ಮೇಲ್ಜಾತಿ ಶೂದ್ರರು ಅವುಗಳನ್ನು ಅರ್ಥಮಾಡಿಕೊಂಡ ರೀತಿ ಪರಿಚಯವಾಗಿತ್ತು.

ಉತ್ಪಾದನಾ ವಿಧಾನಗಳು ಸುಧಾರಿಸಿರಲಿಲ್ಲವಾದ ಕಾರಣ ಕೈಗಾರಿಕಾ ಕ್ರಾಂತಿಗೂ ಮೊದಲಿದ್ದ ಸಮಾಜಿಕ ಪರಿಸ್ಥಿತೀಲಿ; ಕಮ್ಯೂನಿಸಂ ಬರುವುದು ಸಾಧ್ಯವಿರಲಿಲ್ಲ ಎಂದು ತೋರಿಸುವ ಮಾರ್ಕ್ಸ್; ಬಂಡವಾಳಶಾಹಿ ವ್ಯವಸ್ಥೆ ರೂಪಗೊಳ್ಳುವುದಕ್ಕೆ ಮೊದಲು ನಡೆದ ಶೋಷಣೆಯನ್ನು; ಯಾವುದೋ ಒಂದು ಹಂತದಲ್ಲಿ ಸಮರ್ಥಿಸಿದಂತೆ ತೋರಿಬರುತ್ತದೆ. ಬ್ರಾಹ್ಮಣನಿಗೆ ಬೇಕಿದ್ದುದೂ ಅದೇ. ಈ ಎಲ್ಲಾ ಸುಲಿಗೆಗೆ ಧರ್ಮದ ಮುದ್ರೆ ಒತ್ತಿದವನೆ ನಾನು ಎಂಬ ವಾಸ್ತವವನ್ನು ಕನಸಿನಲ್ಲಾದರೂ ಕೇಳಲು ಆತ ತಯಾರಿರುವುದಿಲ್ಲ. ಈ ಹಿನ್ನಲೆಯಲ್ಲಿ ಪುರೋಹಿತ ಪಾಳೇಗಿರಿ ಜಂಟಿ ಕಂಪನಿ ಸಂಬಂಧ ಕಡಿದುಕೊಂಡು ನಗರ ಸೇರಿದ ಬ್ರಾಹ್ಮಣ: ಆ ನಗರವಾಸಿ ಕಾರ್ಮಿಕರಿಗೆ ಮಾರ್ಕ್ಸ್ ತೋರಿಸಿದ ಪರಿವರ್ತನೆಯ ಹರಿಕಾರನ ಪಾತ್ರದಲ್ಲಿ ತನ್ನನ್ನೇ ಕಂಡುಕೊಳ್ಳುತಾನೆ. ನಾನು ಬಂಡವಾಳಶಾಹಿ ಅಲ್ಲ, ಈ ಕಡೆ ಮೇಲ್ಜಾತಿ ಶೂದ್ರರಿಗಿರುವಂತೆ ಆಸ್ತಿ ಬೆಂಬಲವೂ ಇಲ್ಲ, ಶ್ರಮವನ್ನು ಮಾರಾಟಮಾಡಿ ಕೂಲಿ ಸಂಪಾದಿಸುವ ಕಾರ್ಮಿಕ ನಾನು: ಕೆಲವರಿಗಾದರೆ ಮಿಾಸಲಾತಿ ಇದೆ, ನಮಗೆ ಅದೂ ಇಲ್ಲ; ಯಾರೋ ಮಾಡಿದ ತಪ್ಪಿಗೆ ನಮ್ಮನ್ನೇಕೆ ತುಳಿಯಬೇಕು: ಆ ತಪ್ಪು ನಮ್ಮದೂ ಅಲ್ಲ; ತನ್ನ ಆಸ್ತಿ ರಕ್ಷಣೆಗಾಗಿ ಮೇಲ್ಜಾತಿ ಶೂದ್ರ ಬ್ರಾಹ್ಮಣರನ್ನು ಸೃಷ್ಟಿಸಿದ; ನಾವು ಪಾಳೇಗಾರನ ಕೈಯಲ್ಲಿ ಬೆದರುಗೊಂಬೆಗಳಾಗಿದ್ದವು—ಎಂಬೀತೆರನಾಗಿ ಯೋಚನೆ ಮಾಡುವ ಬ್ರಾಹ್ಮಣ: ಅತಿ ಹೆಚ್ಚು ಸುಲಿಗೆಗೊಳಗಾದವರಲ್ಲಿ ನಾನೂ ಒಬ್ಬ ಎಂದು ನಂಬಿಬಿಡುತ್ತಾನೆ. ಆ ರೀತಿ ದೊಡ್ಡ ದೊಡ್ಡ ಕೈಗಾರಿಕೆಗಳ ಬೃಹತ್ ನಗರ ಜಾಲದಲ್ಲಿ ಆಶ್ರಯ ಕಂಡುಕೊಂಡ ಬ್ರಾಹ್ಮಣನ ವಿರುದ್ಧ ತಿರುಗಿಸಲು, ಮೇಲ್ಜಾತಿ ಶೂದ್ರನಿಗೆ ಆಯುಧ ಬೇಕಿತ್ತು; ಲೋಹಿಯಾನ ಗ್ರಾಮ ಸ್ವರಾಜ್ಯ, ಸಣ್ಣ ಕೈಗಾರಿಕೆ ಇತ್ಯಾದಿ ಕುರಿತ ಚಿಂತನೆಯಲ್ಲಿ ಅದನ್ನ ಕಂಡುಕೊಂಡರು.

ಕೆಳಜಾತಿ ಶೂದ್ರರ ಭಯದಿಂದ ಬ್ರಾಹ್ಮಣ ಮತ್ತು ಮೇಲ್ಜಾತಿ ಶೂದ್ರ ಸೇರಿ ಬ್ರಾಹ್ಮಣ್ಯ ವರ್ಗಗಳ ಅಲಿಖಿತ ಒಕ್ಕೂಟ ರೂಪಿಸಿಕೊಂಡರು ನಿಜ, ಅದರಿಂದಾಗಿ ಅವರ ನಡುವೆ ಪರಸ್ಪರ ಆಂತರಿಕ ತಿಕ್ಕಾಟ ಇರಲಿಲ್ಲ ಎಂದೇನೂ ಆ ಮಾತಿನ ಅರ್ಥ ವಲ್ಲ. ಆ ಆಂತರಿಕ ಘರ್ಷಣೆಯು ಮಾರ್ಕ್ಸ್‌ವಾದದ — ಲೋಹಿಯಾವಾದದ

ಮುಖವಾಡ ಹಾಕಿಕೊಂಡಿತು, ಲೇ ಶೂದ್ರ ಮುಂಡೇಗಂಡ, ನೋಡ್ತಾ ಇರು ; ದುಡಿವ ಜನರನ್ನು ಎತ್ತಿ ಕಟ್ಟಿ ಕಮ್ಯೂನಿಸ್ಟ್ ಸರ್ಕಾರ ತಂದು, ನಿನ್ನ ಆಸ್ತಿನೆಲ್ಲ ರಾಷ್ಟ್ರೀಕರಣ ಮಾಡಿಬಿಡುತ್ತಾನೆ ಎಂದು ಬ್ರಾಹ್ಮಣ ಹೇಳಿದರೆ : ಲೇ ಗುಳ್ಳೆನರಿ ಬ್ರಾಹ್ಮಣ, ಕೆಳಜಾತಿ ಶೂದ್ರರನ್ನು ಸೇರಿಸಿಕೊಂಡು ಸಮಾಜವಾದ ನಿರ್ಮಿಸಿ ; ನಿನ್ನ ಕೋಟೆ ಕೊತ್ತಲಗಳನ್ನೆಲ್ಲ ಉಡಾಯಿಸಿಬಿಡುತ್ತಾನೆ, ಎಂದು ಮೇಲ್ಜಾತಿ ಶೂದ್ರ ಹೇಳುತ್ತಾನೆ — ಆ ರೀತಿ ಅವರಿಬ್ಬರ ನಡುವಿನ , ತಿಕ್ಕಾಟವನ್ನು ನಾಟಕೀಕರಿಸಬಹುದು. ಆ ಕಾರಣವೇ ಮಾರ್ಕ್ಸ್‌ವಾದವೇ ಆಗಲಿ ಲೋಹಿಯಾವಾದವೇ ಆಗಲಿ ಯಾರನ್ನು ತಲುಪಬೇಕಿತ್ತೊ ಅವರನ್ನು ತಲುಪಲಿಲ್ಲವಾಗಿ, ಕೊಳೆತುನಾರುವ ಹಳವಂಡಗಳಾಗಿವೆ.

ಬ್ರಾಹ್ಮಣ ಎಂದರೆ ಬೇರೊಬ್ಬರಿಂದ ಬಂದದ್ದನ್ನು ಬಂಡವಾಳ ಮಾಡಿಕೊಳ್ಳಬಲ್ಲ ಕಿಲಾಡಿ ಮಾತ್ರ ಎಂದರ್ಥ. ಅಂದರೆ ಸ್ವಂತವಾಗಿ ಆರ್ಜಿಸುವ ಸಾಮರ್ಥ್ಯ ಇಲ್ಲದವನು. He is clever but not innovative. ಅಂತಹ ಅವನಿಗೆ ಬೇಕಿರುವುದು ಒಂದು ಸಿದ್ಧ ಉತ್ತರ ಅಥವಾ ರೆಡಿಮೇಡ್ ಅಂಗಿ. ಮಾರ್ಕ್ಸ್‌ವಾದದ ಮೂಲಕ ಸಿದ್ಧೌಷದ ಅಥವಾ ರೆಡಿಮೇಡ್ ಉತ್ತರವನ್ನು ಕಂಡುಕೋತಾನೆ. ಭಾರತದ ಮಾರ್ಕ್ಸ್‌ವಾದಿಗಳು ಸ್ವಂತವಾಗಿ ಯೋಚಿಸಲೇ ಇಲ್ಲ. ಆ ಕಾರಣ ಮಾರ್ಕ್ಸ್‌ವಾದ ಈ ದೇಶದಲ್ಲಿ ವಿಫಲವಾಗಬೇಕಾಯಿತು: ಬಿಪಿನ್‌ಚಂದ್ರ ಅವರ ಆ ಮಾತನ್ನು ಈ ಸಂದರ್ಭದಲ್ಲಿ ಪ್ರತೀಕವಾಗಿ ತೆಗೆದುಕೋಬಹುದು. ಲೆನಿನ್ ಮತ್ತು ಮಾವೋ ಸ್ವಂತವಾಗಿ ಯೋಚಿಸುವುದರ ಮೂಲಕ ರಷ್ಯಾ ಮತ್ತು ಚೀನಾ ನೆಲದಲ್ಲಿ ಮಾರ್ಕ್ಸ್‌ವಾದದ ಬಿತ್ತನೆ ಮಾಡಿದರು. ತಮ್ಮ ಜಾತಿ ಮತ್ತು ವರ್ಗದ ಹಿತಾಸಕ್ತಿಗಳ ಪಿಶಾಚಿ ಹಿಡಿತದಿಂದ ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ ಅಥವಾ ಪ್ರಯತ್ನಿಸಲಿಲ್ಲವಾದ ಕಾರಣ, ಭಾರತದ ಮಾರ್ಕ್ಸ್‌ವಾದಿಗಳಿಗೆ ಆ ಸ್ವಂತಿಕೆ ಬರಲಿಲ್ಲ. ಲೋಹಿಯಾವಾದಿಗಳು ಅದೇ ಹಾದಿ ಹಿಡಿದರು. ಹಂಗಾಗಿ ಮಾರ್ಕ್ಸ್‌ವಾದಿಗಳು ಮತ್ತು ಲೋಹಿಯಾವಾದಿಗಳು ಮಕ್ಕಾಮಕ್ಕಿ ಎಡವಿ ನಗೆಗೀಡಾದ ಪ್ರಸಂಗಗಳು ನೂರಾರಿವೆ.

* * *

ಜೆ. ಎಚ್. ಪಟೇಲ್ ಲಿಂಗಾಯಿತ ಸ್ವಾಮಿ ಕಾಲಿಗೆ ಡುರುಕಿ ಹೊಡೆದ ಪ್ರಕರಣ, ಮೇಲ್ಜಾತಿ ಶೂದ್ರ ರಾಜೇಂದ್ರ ಪ್ರಸಾದ್, ಕಾಶೀಲಿ ಬ್ರಾಹ್ಮಣರ ಕಾಲು ತೊಳೆದು ತೀರ್ಥ ಕಂಡಿದ ಪ್ರಸಂಗವನ್ನು ಖಂಡಿಸಿದವರು ಲೋಹಿಯಾ ಮಾತ್ರ. ಮೊದಲನೇದಾಗಿ, ರಾಜೇಂದ್ರ ಪ್ರಸಾದ್ ಒಬ್ಬ ಸನಾತನಿ. ತನ್ನ ನಂಬಿಕೆಗೆ ಅನುಸಾರವಾಗಿ ಆತ ಅಲ್ಲಿ ನಡೆದುಕೊಂಡಿದ್ದ. ಪ್ರಸಾದ್ ಒಬ್ಬ ವ್ಯಕ್ತಿಯಾಗಿ ಆ ಕೆಲಸ ಮಾಡಿದ್ದರೆ, ಯಾರು ಅದನ್ನು ಗಮನಿಸುತ್ತಲೇ ಇರಲಿಲ್ಲ. ಆದರೆ ಬ್ರಾಹ್ಮಣರ ಕಾಲಿಗೆ

ಬಿದ್ದಾತ ; ದೇಶದ ಪ್ರಥಮ ಪ್ರಜೆ ಮತ್ತು ಸಂವಿಧಾನದ ಅಧಿಪತಿ ; ಸೆಕ್ಯೂಲರ್ ಸಂವಿಧಾನದ ಘನತೆಯನ್ನು ಎತ್ತಿಹಿಡಿಯ ಬೇಕಾದವನೇ, ಅದರ ವಿರುದ್ಧ ನಡೆದು ಕೊಂಡಿದ್ದ. ಈ ತಾತ್ವಿಕ ಹಿನ್ನೆಲೆಯಲ್ಲಿ ಲೋಹಿಯಾ ಆ ಪ್ರಕರಣವನ್ನು ತೀವ್ರವಾಗಿ ಖಂಡಿಸಬೇಕಾಯಿತು.

ಜೆ. ಎಚ್. ಪಟೇಲ್ ಒಂದು ರಾಜ್ಯದಲ್ಲಿ After all ಮಂತ್ರಿ. ಆತ ಮಂತ್ರಿಯಾಗಿರುವ ಜನತಾ ಸರ್ಕಾರ ಹೋರಾಟ ಮತ್ತು ಸಂಘಟನೆ ಮೂಲಕ ಬಂದ ಸಮಾಜವಾದಿ ಸರ್ಕಾರ ಏನಲ್ಲ. ಆತ ಮಂತ್ರಿಯಾದದ್ದು ಸಮಾಜವಾದಿ ಅನ್ನೋ ಕಾರಣಕ್ಕಿಂತಲೂ ಹೆಚ್ಚಾಗಿ, ಲಿಂಗಾಯಿತರ ಒಂದು ಒಣದ ಪ್ರತಿನಿಧಿಯಾಗಿ. ಹಾಗಾಗಿ ಆತ ಲಿಂಗಾಯಿತ ಸ್ವಾಮಿ ಕಾಲಿಗೆ ಬಿದ್ದದ್ದು ಅಪ-ವರ್ತನೆ ಆಗಿಲ್ಲದಿರಬಹುದು ಅಥವಾ ಸರಿಯಾದ ಘಟನೆಯೇ ಆಗಿದ್ದಿರಬಹುದು. ಒಂದು ರಾಜ್ಯದ ಮಂತ್ರಿಮಂಡಲವನ್ನು ಸೆಕ್ಯೂಲರ್ ಎಂದು ತೆಗೆದುಕೊಳ್ಳುವುದಾದರೆ ; ಯಾವನೇ ಒಬ್ಬ ಮಂತ್ರಿ, ಯಾವನೇ ಒಬ್ಬ ಮಠದ ಸ್ವಾಮಿ ಕಾಲಿಗೆ ಬೀಳುವುದು ದೋಷವಾಗುತ್ತದೆ. ಏಕೆಂದರೆ ಆ ಗಳಿಗೆಯಲ್ಲಿ ರಾಜ್ಯಾಂಗದ ಜಾತ್ಯಾತೀತ ಚೇತನದ ಉಲ್ಲಂಘನೆ ಆಗಿರುತ್ತದೆ.

ಆ ಬಗ್ಗೆ ಬೊಬ್ಬೆ ಎಬ್ಬಿಸಿದ ತೇಜಸ್ವಿ ಈ ಎಲ್ಲ ಸೂಕ್ಷ್ಮಗಳನ್ನು ಗಮನಿಸಲೇ ಇಲ್ಲ. ಅವರ ಪ್ರಕಾರ, ಲೋಹಿಯಾ ವಾದಿಯಾದ ಜೆ. ಎಚ್. ಪಟೇಲ್‌ಸ್ವಾಮಿ ಕಾಲಿಗೆ ಬಿದ್ದದ್ದು ತಪ್ಪು, ಇತರೇ ಮಂತ್ರಿಗಳು ಅದೇ ಕೆಲಸ ಮಾಡಿದರೆ ತಪ್ಪಲ್ಲ ಎಂದಾಗುತ್ತದೆ. ಪಟೇಲ್ ಸ್ವಾಮಿ ಕಾಲಿಗೆ ಬಿದ್ದ ಪ್ರಸಂಗವನ್ನು ಖಂಡಿಸಬಾರದೆಂ ಎಂದು ಹೇಳುತ್ತಿಲ್ಲ. ಲೋಹಿಯಾವಾದಿ ಎಂದು ಕರೆಸಿಕೊಳ್ಳುವ ವ್ಯಕ್ತಿಯೊಬ್ಬ ಸಚಿವನಾದ ನಂತರ, ಆ ರೀತಿ ವರ್ತಿಸಿದ್ದು ಗಾಬರಿ ತರಿಸುತ್ತದೆ ನಿಜ. ಆದರೆ ಅದನ್ನು ಖಂಡಿಸುವ ಭರದಲ್ಲಿ ತೇಜಸ್ವಿ, ತೀರ ಗುರುತರವೂ ಮತ್ತು ಮಾನವ ಜನಾಂಗ ವಿರೋಧಿಯೂ ಆದ ಮತ್ತೊಂದು ದುರಂತವನ್ನು ಪರಿಗಣಿಸಲಿಲ್ಲ. ಬ್ರಾಹ್ಮಣರ ಕಾಲು ತೊಳೆದು ನೀರು ಕುಡಿದ ಪ್ರಸಾದ್ ಅದೇ ತರುವಾಯದಲ್ಲಿ ಮತ್ತೊಂದು ಮೂರ್ಖ ಕೆಲಸ ಮಾಡಿರಲಿಲ್ಲ. ಮಾಡಿದ್ದಲ್ಲಿ ಲೋಹಿಯಾ ಅದನ್ನು ಖಂಡಿಸಿದ್ದರು. ಆದರೆ ಸ್ವಾಮಿ ಕಾಲಿಗೆ ಬಿದ್ದ ಸಂದರ್ಭದಲ್ಲಿ ಪಟೇಲ್ ಅಣುವಿದ್ಯುತ್ ಪರವಾಗಿಯೂ ಮಾತನಾಡಿದರು. ಅದರ ಜತೆ ಹೋಲಿಸಿದರೆ ಸ್ವಾಮಿಂ ಕಾಲಿಗೆ ಬಿದ್ದ ಘಟನೆ ತೀರ ಜುಜುಬಿ.

ಸಮಾಜವಾದಿ ಎಂದು ಭಾವಿಸಲಾದ ವ್ಯಕ್ತಿಯೊಬ್ಬ ಮಠದ ಸ್ವಾಮಿ ಕಾಲಿಗೆ ಬೀಳುವುದು, ಒಂದು ಆತ್ಮಹತ್ಯೆಯ ಪ್ರಕರಣ. ಆದರೆ ಅದೇ ವ್ಯಕ್ತಿ, ವಿದ್ಯುತ್ ಖಾತೆ ಮಂತ್ರಿಯಾಗಿ ರಾಜ್ಯದ ಜನತೆ ಹೆಸರಿನಲ್ಲಿ ಅಣುವಿದ್ಯುತ್ ಬಗ್ಗೆ ತೆಗೆದು

ಕೊಂಡ ನಿರ್ಣಯ ಖಂಡಿತ ವೈಯಕ್ತಿಕ ಅಲ್ಲ. ವೈಜ್ಞಾನಿಕ ನೆಲೆಯಲ್ಲಿ ಕಾದಂಬರಿ ಬರೆಯಲು ಹವಣಿಸುವ ತೇಜಸ್ವಿಗೆ, ಅದು ಗುರುತರವಾಗಿ ಕಾಣಲಿಲ್ಲ. ಬದಲಾಗಿ ನರಕದ ಕೊನೇ ಗುಂಡಿಯಲ್ಲಿ ಹೋಗಿ ಬಿದ್ದರೂ ಪರವೇ ಇಲ್ಲ: ಮೇಲೆದ್ದು ಬರುವ ಕಿಲಾಡಿತನ ಪಟೇಲರಿಗಿದೆ; ಎಂದೇನೇನೋ ಪೋಪ್‌ನಂತೆ ಮಾತನಾಡಿದರು.

ಇಂದನ ಪೂರೈಕೆ ನಿಂತುಹೋದ ಮರುಗಳಿಗೆಯೆಲ್ಲೇ, ತಂತ್ರಜ್ಞಾನ ಅವಲಂಬಿತವಾದ ಇಂದಿನ ನಾಗರೀಕತೆ ಖಲಾಸ್ ಆಗುತ್ತದೆ. ಆ ಅರ್ಥದಲ್ಲಿ ಆಧುನಿಕ ನಾಗರೀಕತೆ ಎಂಬುದು, ಇಂಡನದ ಕತೆಯಾಗಿದೆ. ಇಂದನಕ್ಕಾಗಿ ಜನ ಭೂಮಿಯನ್ನೇ ಅಡ್ಡಡ್ಡ ನುಂಗ್ತಾ ಇದಾರೆ. ಹಾಗಾಗಿ ಮತ್ತೆ ಉಪಯೋಗಿಸಬರುವ ಅಥವಾ ನವೀಕರಿಸಬಹುದಾದ ಬದಲೀ ಇಂದನ ವ್ಯವಸ್ಥೆ ಕುರಿತು ಪರ್ಯಾಲೋಚಿಸುವವರನ್ನು, ಸಮಾಜವಾದಿ ಎಂದು ಗುರುತಿಸಲಾಗಿದೆ. ಆ ಕನಸು, ಕಲ್ಪನೆ ಹತ್ತೋದು ಸಮಾಜ ವಾದಿಗಳಾದವರಿಗೆ ಮಾತ್ರ, ಸಮಾಜವಾದಿ ಆದವ, ಕಾಡುಮನುಷ್ಯನಷ್ಟೇ ತಿವ್ರ ಪ್ರಕೃತಿ ಪ್ರೇಮಿ. ಅಂತಹ ಸಮಾಜವಾದಿ ಜೀವ ಮತ್ತು ಪ್ರಕೃತಿ ವಿರೋಧಿಯಾದ ಅಣುವಿದ್ಯುತ್ ಶತ್ರುವಾಗುವುದು ಸ್ವಾಭಾವಿಕ. ಹಾಗಿದ್ದ ಮೇಲೆ, ಅಣುವಿದ್ಯುತ್ ಬೇಕೆನ್ನುವ ಜೆ. ಎಚ್. ಪಟೇಲ್, ಸಮಾಜವಾದಿ ಆಗಿರಲು ಹೇಗೆ ಸಾಧ್ಯ?

ಕೇರಳದಲ್ಲಿ ಮೌನ ಕಣಿವೆ ಯೋಜನೆ ರೂಪಿಸಿದ ಕಮ್ಯೂನಿಸ್ಟರು, ಮಾರ್ಕ್ಸ್ ವಾದಿಗಳಿಲ್ಲವಾದಂತೆ: ಅಣು ವಿದ್ಯುತ್ ವಕ್ತಾರನಾದ ಪಟೇಲ್ ಖಂಡಿತ ಸಮಾಜವಾದಿ ಅಲ್ಲ. ಆ ಜನ ನಿಜವಾದ ಅರ್ಥದಲ್ಲಿ ಯಾವತ್ತು ಮಾರ್ಕ್ಸ್‌ವಾದಿಗಳು ಅಥವಾ ಲೋಹಿಯಾವಾದಿಗಳು ಆಗಿರಲಿಲ್ಲ. ಹಂಗಾಗಿ ಕಾಂಗ್ರೆ ಜನರಂತೆ ಅವರೂನೂ ಅಣು ವಿದ್ಯುತ್ ಬೇಕು, ವಿಕಾರಣದಿಂದ ಜೀವ ಸಮಸ್ತವೂ ವಿಲಿವಿಲಿ ಒದ್ದಾಡಿದರೂ ಪರವಾಯಿಲ್ಲ; ಮೌನ ಕಣಿವೆ ಯೋಜನೆ ಬೇಕು, ಪರಿಸರ ಹಾಳಾದರೂ ಹಾಳಾಗಲಿ ಆವರಣ ಸಮತೋಲನ ತಲಕೆಳಗಾಗಲಿ ಯಾರಿಗೇನಂತೆ—ಇತ್ಯಾದಿ ವರಸೆಯಲ್ಲಿ ಮಾತನಾಡುವುದು ಸಹಜವೇ ಆಗಿದೆ.

ಬುದ್ಧೀಸ್ಥಿಮಿತವಿದ್ದ ಜನತೆ ತೀವ್ರವಾಗಿ ಪ್ರತಿಭಟಿಸಿದ ಕಾರಣ, ಮೌನ ಕಣಿವೆ ಯೋಜನೆಯನ್ನು ಕೈಬಿಡಬೇಕಾಯಿತು. ಆದರೆ ಅಣು ವಿದ್ಯುತ್ ಕೇಂದ್ರ ಸ್ಥಾಪನೆ ವಿರೋಧಿಸಿ ರಾಜ್ಯದ ಯಾವುದೇ ಮೂಲೆಯಿಂದಾದರೂ ನಾಲಿಗೆ ಏಳಲಿಲ್ಲ, ಪತ್ರಿಕೆಗಳು ತೆಪ್ಪಗಿವೆ. 'ಧರ್ಮಸಂಸ್ಥಾಪಕನಾರ್ಥಾಯ ಸಂಭಾವಾಮಿ ಯುಗೆಯುಗೇ, ಎಂಬ ಕೋಗಿಲೆ ದನಿಯ 'ಲಂಕೇಶ್ ಪತ್ರಿಕೆ'ಯು, ಆ ವಿರುದ್ಧ ಮಾತನಾಡಲಿಲ್ಲ. ಅಣು ವಿದ್ಯುತ್ ಕೇಂದ್ರ ಸ್ಥಾಪನೆ ಸೂಕ್ತವಾದ ಸ್ಥಳ, ಉತ್ತರ ಕನ್ನಡ ಜಿಲ್ಲೆಯಲ್ಲಿ ಇದೆಯಂತೆ. ಆ ಪ್ರದೇಶ, ರಾಜ್ಯದ ನಾಡಿ ಇದ್ದ ಹಾಗೆ.

ಅಣುವಿದ್ಯುತ್ತಿನ ಲಾಭ ಆಗೋದು ಟಾಟಾ-ಬಿರ್ಲಾಗಳಿಗೆ. ಮುಂದುವರಿದ ದೇಶಗಳ ಜನತೆ ಅಣುವಿದ್ಯುತ್ ವಿರುದ್ಧ, ದೊಡ್ಡ ಆಂದೋಳನವನ್ನೇ ಆರಂಭಿಸಿದಾರೆ. ಜತೆಗೆ ವಿದ್ಯುತ್ ಉತ್ಪಾದನೆಗೆ ಬಳಸುವ ಯುರೇನಿಯಂ ಇತ್ಯಾದಿ ವಸ್ತುಗಳು ಆನಂತರ ಏನು ಮಾಡುವುದು, ಎಂಬ ವಿಚಾರ ಅವರಿಗೆ ತಲೆಬೇನೆ ತಂದಿದೆ. ಹಾಗಾಗಿ ಆ ರಾಷ್ಟ್ರಗಳ ಬಂಡವಾಳಶಾಹಿಗಳು ಅಣುವಿದ್ಯುತ್ ಉತ್ಪಾದನಾ ಸಾಮಗ್ರಿಗಳನ್ನು ಬಡ ದೇಶಗಳ ತಲೆಗೆ ಕಟ್ಟಲು ತುದಿಗಾಲಲ್ಲಿ ನಿಂತಿದಾರೆ. ತಾರಾಪುರ ಅಣುಸ್ಥಾವರಕ್ಕಾಗಿ ಕಾಂಗ್ರೆಸ್ ಜನರು, ಜಗತ್ತಿನಲ್ಲಿ ಬಿಕ್ಷೆ ಬೇಡುತ್ತಿರುವುದು ಎಲ್ಲರಿಗೂ ಗೊತ್ತಿರುವ ವಿಚಾರ. ತೇಜಸ್ವಿಗೆ ಇದ್ಯಾವುದೂ ಮುಖ್ಯವಾಗಲಿಲ್ಲ. ಪಟೇಲ್ ಸ್ವಾಮಿ ಕಾಲಿಗೆ ಬಿದ್ದದ್ದು ದೊಡ್ಡ ಸಂಗತಿಯಾಗಿ ಕಂಡಿತು.

ಈ ಹಿನ್ನಲೆಯಲ್ಲಿ ನೋಡಿದರೆ, ಲೋಹಿಯಾವಾದಿಗಳು ಎನಿಸಿಕೊಂಡವರು ತಮ್ಮ ಶಕ್ತಿಯನ್ನೆಲ್ಲ ಚಿಲ್ಲರೆ ವಿಚಾರಗಳಲ್ಲಿ ಖರ್ಚುಮಾಡಿಕೊಂಡರೆಂದು ನಿಮಗನ್ನಿಸುವುದಿಲ್ಲವೆ.?

ಸೋವಿಯತ್ ರಷ್ಯಾದಲ್ಲಿ ಅಣುಸ್ಥಾವರವೊಂದು ಸೋರತೊಡಗಿದ ಕಾರಣ ಸಾವಿರಾರು ಜನರು ವಿಕಿರಣದ ಪರಿಣಾಮದಿಂದ ಸತ್ತ ಸುದ್ದಿ ತೀರ ಇತ್ತೀಚೆಗೆ ಬಹಿರಂಗ ವಾಯಿತು. ಪ್ರಪಂಚದಲ್ಲಿ ಲಕ್ಷಾಂತರ ಜನರು ದಿನನಿತ್ಯ ಹೊಟ್ಟೆಗಿಲ್ಲದೆ ಸಾಯುತ್ತಿರು ವಾಗ: ಸೋವಿಯತ್ ರಷ್ಯಾದಲ್ಲಿ ಒಂದು ನೂರು ಮಂದಿ ಸತ್ತಿದ್ದರ ಬಗ್ಗೆ ನಿಮಗ್ಯಾಕೆ ಅಷ್ಟೊಂದು ಕನಿಕರ—ಕಾಳಜಿ ಎಂದು ಮಾರ್ಕ್ಸ್‌ವಾದಿಗಳು ತರ್ಕ ಹೂಡುತ್ತಾರೆ. ಹೌದು ಸ್ವಾಮಿ. ನೀವು ಹೇಳುವ ಮಾತು ನಿಜ. ಹೊಟ್ಟೆಗಿಲ್ಲದೆ ಜನ ಸಾಯುತ್ತಿರ ವುದು, ಡಕಾಯಿತರೇ ಅಧಿಕಾರಕ್ಕೆ ಬರಲು ಸಾಧ್ಯವಿರುವಂತಹ ವ್ಯವಸ್ಥೇಲಿ. ಆದರೆ ಅಂತಹ ವ್ಯವಸ್ಥೆಯನ್ನು ಕೊನೆಗಾಣಿಸಿದ್ದೇವೆ ಎಂದು ಕೂಗು ಹಾಕುವ ಸೋವಿಯತ್ ಸಮಾಜದಲ್ಲಿ, ಸ್ವಾಭಾವಿಕವಲ್ಲದ ರೀತೀಲಿ ಒಬ್ಬ ಸತ್ತದ್ದು—ಗಾಭರಿತರಿಸುವ ಸಂಗತಿ ಯಾಗಿಬಿಡುತ್ತದೆ. ಎಂದರೆ ಅದು ಆವರ ತಲೆಗೆ ಹೋಗೋದಿಲ್ಲ. ಫ್ರಾನ್ಸ್ ಅಧ್ಯಕ್ಷ ಫ್ರಾಂಸ್‌ವಾ ಮಿತೆರಾ, ಆಂದ್ರಿ ಸಖಾರೋವ್ ಬಗ್ಗೆ ವಿಚಾರಿಸಿದಾಗ : ಸೋವಿಯತ್ ರಷ್ಯಾದ ಅಧ್ಯಕ್ಷ ಚೆರ್ನೆಂಕೋ-ನೋಡಿ ನಿಮ್ಮ ದೇಶದಲ್ಲಿ ಲಕ್ಷಾಂತರ ನಿರುದ್ಯೋಗಿ ಗಳಿದಾರೆ, ನಮ್ಮಲ್ಲಿ ಎಲ್ಲರಿಗೂ ಉದ್ಯೋಗ ನೀಡಿದ್ದೇವೆ ಎಂದರಂತೆ.

ಭಾರತಕ್ಕೆ ಅಣುತಂತ್ರ ಜ್ಞಾನದ ನೆರವು ನೀಡಲು ಮುಂದೆ ಬಂದಿರುವ ರಾಷ್ಟ್ರ ಗಳಲ್ಲಿ, ಸೋವಿಯತ್‌ರಷ್ಯಾವು ಒಂದು. ಅಂತಹ ಸೋವಿಯತ್ ರಷ್ಯಾವನ್ನು 'ಫಾದರ್ ಲ್ಯಾಂಡ್' ಎಂದು ತಿಳಿದಿರುವ ಈ ದೇಶದ ಮಾರ್ಕ್ಸ್‌ವಾದಿಗಳು, ಪ್ರತಿಭಟಿಸುತ್ತಾರೆಂದು ನಿರೀಕ್ಷಿಸಲು ಸಾಧ್ಯವೇ? (ಸಶೇಷ)

* * *

# ಹರಿಶ್ಚಂದ್ರ ಕಾವ್ಯದ ಹೊಲತಿಯರು: ಒಂದು ವಿವೇಚನೆ

—ವಿಜಯಶ್ರೀ ಸಬರದ

ಹರಿಶ್ಚಂದ್ರ ಚರಿತ್ರೆ ವೇದ – ಪುರಾಣ - ಸಾಹಿತ್ಯಗಳಲ್ಲಿ ಪ್ರಸಿದ್ಧವಾದ ಪುರಾತನ ಕಥೆ. ವೈದಿಕ ಗ್ರಂಥಗಳಲ್ಲಿ ಈ ಕಥೆ ಯಾಜ್ಞಕಾಂಶಗಳನ್ನೊಳಗೊಂಡಿದ್ದರೆ, ಪೌರಾಣಿಕ ಗ್ರಂಥಗಳಲ್ಲಿ ಐತಿಹಾಸಿಕ ಅಂಶವನ್ನೊಳಗೊಂಡ ಭಾವಾವೇಶದಿಂದೊಡಗೂಡಿದೆ. ಹರಿಶ್ಚಂದ್ರನ ಕಥೆಗೆ ಸಂಬಂಧಿಸಿದ ಈ ಎಲ್ಲವೂ ಆಮೂಲಾಗ್ರವಾಗಿ, ವಿವರವಾಗಿ ಯಾವ ಒಂದು ಕಡೆಗೂ ಸಿಗುವುದಿಲ್ಲ. ಹರಿಶ್ಚಂದ್ರನ ವೃತ್ತಾಂತವನ್ನು ಹೇಳುವ ಪ್ರಮುಖ ವೈದಿಕ ಗ್ರಂಥಗಳೇ ಮೂರು.

1) ಐತರೇಯ ಬ್ರಾಹ್ಮಣ (ಪಂಚಿಕಾ 7 ಅಧ್ಯಾಯ-3)
2) ಸಾಂಖ್ಯಾಯನ ಶ್ರೌತ ಸೂತ್ರ (15 : 17 : 25)
3) ವೇದಾರ್ಥ ದೀಪಿಕಾ (ಋಗ್ವೇದ ಭಾಗ 124)

ಇವು ಪುರಾಣಗಳಿಗಿಂತಲೂ ಪ್ರಾಚೀನವಾದವುಗಳು. ಹದಿಮೂರನೇ ಶತಮಾನ ದಲ್ಲಿದ್ದ ರಾಘವಾಂಕನು ತನ್ನ ಕಾಲದಲ್ಲಿದ್ದ ಪೌರಾಣಿಕ ಕಥೆಯನ್ನೇ ತೆಗೆದುಕೊಂಡು ಕಾವ್ಯ ರಚಿಸಿದ್ದಾನೆ. ಮೂಲದಲ್ಲಿ ಇರದ "ಹೊಲತಿಯರ ಪ್ರಸಂಗ" ವಿಶ್ವಾಮಿತ್ರ ನಿಂದಾದ ಶೋಷಣೆ 'ಹರಿಶ್ಚಂದ್ರನ ಔದಾರ್ಯ' ಇವೆಲ್ಲಾ ರಾಘವಾಂಕ ತನ್ನ ಕಾವ್ಯ ದಲ್ಲಿ ಜೋಡಿಸಿಕೊಂಡ ಹೊಸ ಅಂಶಗಳು.

ಷಟ್ಪದಿಯಂತಹ ದೇಸಿ ಛಂದಸ್ಸನ್ನು ಕನ್ನಡ ಕಾವ್ಯದಲ್ಲಿ ಪ್ರಾರಂಭಿಸುವುದರ ಮೂಲಕ ರಾಘವಾಂಕ ಷಟ್ಪದಿಯ ಹರಿಕಾರನಾದ. ರಾಘವಾಂಕನಿಗಿಂತ ಮುಂಚೆಯೇ ಷಟ್ಪದಿಯ ಉಗಮವಿದ್ದರೂ, ಅದಕ್ಕೆ ಹೊಸ ಆಯಾಮ ಕೊಟ್ಟು ಕಾವ್ಯದಲ್ಲಿ ಷಟ್ಪದಿಯ ಪರಂಪರೆಯನ್ನೇ ಹಾಕಿಕೊಟ್ಟವ ರಾಘವಾಂಕ, ಮನುಜರ ಮೇಲೆ, ಸಾಯುವರ ಮೇಲೆ ಬರೆಯುವುದು ವ್ಯರ್ಥವೆಂದು ತಿಳಿದುಕೊಂಡ ಹರಿಹರ, ರಾಘ ವಾಂಕನ ಗುರು ಮತ್ತು ಸೋದರಮಾವನಾದರೂ ರಾಘವಾಂಕ ಮನುಜರ ಮೇಲೆ

---

ಪ್ರೊ॥ ವಿಜಯಶ್ರೀ ಸಬರದ, ಅಕ್ಕಮಹಾದೇವಿ ಮಹಿಳಾ ಕಾಲೇಜು, ಬೀದರ-585401.

ಕಾವ್ಯ ಬರೆದು ಖ್ಯಾತನಾದವ. ಸಂಪ್ರದಾಯದ ನೆಲೆಯಲ್ಲೇ ಬದುಕಿ ಜನಪರ ಒಲವುಗಳಿಸಿಕೊಂಡವ. ಆದ್ದರಿಂದ ಹರಿಹರನಿಗಿಂತ ರಾಘವಾಂಕ ನಮಗೆ ಹತ್ತಿರ ವಾಗುತ್ತಾನೆ.

ಹನ್ನೆರಡನೇ ಶತಮಾನದ ವಚನಕಾರರ ಪ್ರಭಾವ ಹರಿಹರ - ರಾಘವಾಂಕರಿಬ್ಬರ ಮೇಲಾಗಿದ್ದರೂ, ಅದರ ರೀತಿ ಮಾತ್ರ ಬೇರೆ - ಬೇರೆ. ಇಹದಲ್ಲಿಯೇ ಪರವನು ಕಂಡ ಶರಣರು ಜನಸಾಮಾನ್ಯನ - ದೀನ ದಲಿತರ ಧ್ವನಿಯಾಗಿ ಮಾತನಾಡಿದರು. ಆದರೆ ಹರಿಹರ ಶರಣರ 'ಪರ' ವೊಂದನ್ನೇ ಹಿಡಿದುಕೊಂಡು ಜಗ್ಗಾಡುತ್ತಾ, ಸಾಮಾನ ರಾಗಿ ಬದುಕಿದ ಶರಣರನ್ನು ಪುಷ್ಪಕ ವಿಮಾನಗಳಲ್ಲಿ ಹಾರಾಡಿಸುತ್ತಾ, ಕಾಯಕವೇ ಕೈಲಾಸವೆಂದು ಸತ್ತ ಆ ವಚನಕಾರರನ್ನು ತನ್ನ ಕಾವ್ಯದಲ್ಲಿ ಮತ್ತೊಮ್ಮೆ ಹುಟ್ಟಿಸಿ, ಆಕಾಶದಲ್ಲಿ ಕೈಲಾಸ ತೋರಿಸುತ್ತಾ ಶರಣರ ನಿಜವಾದ ತತ್ವಗಳಿಗೆ ಮುಸಿಬಳಿದ ವಾಸ್ತವತೆಯ ತಳಹದಿಯ ಮೇಲೆ ಬದುಕಿದ ಪ್ರಮಾಣಿಕ ವಚನಕಾರರ ಸುತ್ತಾ ಪವಾಡದ ಕತೆಗಳನ್ನೂ ಹೆಣೆದು ಅವರ ನಿಜವಾದ ಧೋರಣೆಗೆ ಮೋಸ ಮಾಡಿದ ಭಕ್ತಿಯ ಹುಟ್ಟನಲ್ಲಿ, ಭಾವಾವೇಶದ ಅಮಲಿನಲ್ಲಿ ವಚನಕಾರರ ಒಟ್ಟು ಬದುಕನ್ನೇ ವಿಕೃತಗೊಳಿಸಿದ. ತಾನು ಮಾವ – ಗುರು ಎಂಬ ದಾರ್ಷ್ಟ್ಯದಿಂದ ಜನಪರ ನಿಲುವಿನ ಕವಿ ರಾಘವಾಂಕನ ಹಲ್ಲು ಮುರಿದು ತಾನು ಬಿದ್ದ ಕಂದಕದಲ್ಲೇ ಆತನನ್ನೂ ಎಳೆದು ಕೊಂಡ. ಇಂತಹ ಜಡ ಸಂಪ್ರದಾಯಲ್ಲಿದ್ದುಕೊಂಡೇ ರಾಘವಾಂಕ ಹರಿಶ್ಚಂದ್ರ ಕಾವ್ಯದಲ್ಲಿ ಜನಪರ ನಿಲುವಿನ ಹೊಸ ದಿಕ್ಕುಗಳನ್ನು ಸೂಚಿಸಿದ್ದು, ಶತ-ಶತಮಾನಗಳಿಂದ ಶೋಷಣೆ ಮಾಡುತ್ತ ಬಂದ ವೈದಿಕಶಾಹಿ ಪ್ರತಿನಿಧಿ ವಿಶಾಮಿತ್ರನ ಸೊಕ್ಕು - ಅಹಂಕಾ ರವನ್ನು ಖಂಡಿಸಿದ್ದು ನಮಗಿಂದಿಗೂ ರೆಲೆವೆಂಟ್ (ಸೂಕ್ತ) ಎನಿಸುತ್ತದೆ. ಆದ್ದರಿಂದ ರಾಘವಾಂಕ ಗುರುವಾದ ಹರಿಹರನನ್ನೂ ಮೀರಿ ಬೆಳೆದು 'ಜನಪರ'ಕ್ಕೆ ಪ್ರಾಮುಖ್ಯತೆ ಕೊಡುವುದರ ಮೂಲಕ ವಚನಕಾರರನ್ನು ನೆನಪಿಗೆ ತರುತ್ತಾನೆ.

ರಾಘವಾಂಕನ ಹರಿಶ್ಚಂದ್ರ ಕಾವ್ಯ ಆತನ ಸಿದ್ಧರಾಮ ಪುರಾಣ, ಸೋಮನಾಥ ಚರಿತ್ರೆಗಳಿಗಿಂತ ಭಿನ್ನವಾದುದು. ಹರಿಶ್ಚಂದ್ರ ಸತ್ಯವ್ರತ - ಶಿವಭಕ್ತನಾಗಿದ್ದರೂ ಶಿವಸಂಕಲ್ಪದಿಂದಾಗಲಿ, ಯಾರದೋ ಪ್ರಸಾದದಿಂದಾಗಲಿ ಹುಟ್ಟಿದವನಲ್ಲ. ಬುರುಡೆ ಬಿಡುವ ಪವಾಡ ಪುರುಷನೂ ಅಲ್ಲ. ಅವನೊಬ್ಬ ನರ ಮನುಷ್ಯ. ಎರಡು ವೈದಿಕ ಕೋಣಗಳ ಹಣಾಹಣೆಯಲ್ಲಿ ನರುಳುತ್ತಿರುವ ಜನಸಾಮಾನ್ಯರ ಶತಮಾನಗಳ ಪ್ರತಿನಿಧಿ.

ಹರಿಶ್ಚಂದ್ರ ಕಾವ್ಯದ ಸೊಗಸು ಅದರ ಕಾವ್ಯ ಪರಿಕರಗಳನ್ನು ಮೀರಿ ಬೆಳೆಯು ತ್ತದೆ. ತಾನು ಬರೆಯುತ್ತಿರುವುದರ ಬಗೆಗೆ ಕವಿಗೆ ವಿಶ್ವಾಸವಿದೆ. ಚಲನಶೀಲಗುಣ

ಬಹಳ ಮುಖ್ಯವಾದುದು. 'ನಡೆವರೆಡಹದೆ ಕುಳಿತರೆಡಹುವರೆ' ಎಂಬ ಕವಿಯ ಮಾತು ಇಂದಿಗೂ ಅರ್ಥಪೂರ್ಣವೆನಿಸುತ್ತದೆ. ರನ್ನನ ಗದಾಯುದ್ಧದ ತರುವಾಯ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಮಾತ್ರ ಸಂಭಾಷಣೆಗಳು ಅತ್ಯಂತ ಸಮರ್ಪಕವಾಗಿ ಮತ್ತು ನಾಟಕೀಯವಾಗಿ ಅರ್ಥವತ್ತಾಗಿ ವರ್ಣಿತವಾಗಿವೆ.

ವಶಿಷ್ಠ – ವಿಶ್ವಾಮಿತ್ರರ ಸಂವಾದದಲ್ಲಿ ಬರುವ ಅವರ ಹಠ, ಛಲ ಈರ್ಷೆಗಳಿಗೆ ಹರಿಶ್ಚಂದ್ರನಂತಹ ನಿಯತ್ತಿನ ಅರಸ ಮತ್ತು ಬಡಪಾಯಿ ಪ್ರಜೆಗಳೆಲ್ಲಾ ನೊಂದು ಪರಿತಪಿಸುವುದನ್ನು ದಟ್ಟವಾಗಿ ಚಿತ್ರಿಸುವುದರ ಮೂಲಕ ರಾಘವಾಂಕ ವೈದಿಕ ಶಾಹಿಯ ಶತಮಾನಗಳ ಸೋಗಲಾಡಿತನವನ್ನು ಬಯಲಿಗೆಳೆಯುತ್ತಾನೆ. ತಾನೊಬ್ಬ ದೊಡ್ಡ ರಾಜರ್ಷಿ ಎಂದು ಕೊಬ್ಬಿದ ವಿಸ್ವಾಮಿತ್ರ ; ವಶಿಷ್ಠನೊಂದಿಗೆ ತಾನು ಆಡಿದ ಮಾತನ್ನು ಉಳಿಸಿಕೊಳ್ಳಲು ಕೇವಲ ತನ್ನ ಹಟವೊಂದನ್ನು ಸಾಧಿಸಲಿಕ್ಕೆ ಇಡೀ ರಾಜ್ಯದಲ್ಲೇ ಕ್ಷೋಭೆಯನ್ನುಂಟುಮಾಡುತ್ತಾನೆ. ಪ್ರಜಾಕೋಟಿಗೆಲ್ಲಾ ನಿರಂತರ ಕಿರುಕುಳ ಕೊಡುತ್ತಾನೆ. ಮೃಗ ಸಮೂಹವೆಲ್ಲಾ ನಾಡಿನ ಬೆಳೆಯನ್ನೆಲ್ಲಾ ತಿನ್ನುವಂತೆ ಮಾಡಿ, ತೋಟದ ಗಡ್ಡೆ ಗೆಣಸು ಹಂದಿಗಳ ಪಾಲು ಮಾಡಿ ರಾಜ್ಯವಲ್ಲೇ ದಾರುಣ ಪರಿಸ್ಥಿತಿಯನ್ನು ತಂದೊಡ್ಡುತ್ತಾನೆ. ವಿಶ್ವಾಮಿತ್ರನ ಈರ್ಷೆ, ಮತ್ತು ನೊಂದು ಬೆಂದು ಪರಿತಪಿಸುತ್ತಿರುವ ಜನತೆ, ಇವೆಲ್ಲಾ ಸನ್ನಿವೇಶವನ್ನು ಕವಿ ರಾಘವಾಂಕ ಮನಕಲುಕುವಂತೆ ಚಿತ್ರಿಸಿದ್ದಾನೆ.

ಮೊಳೆವ ಬೀಜಗಳನ್ನೆಲ್ಲಾ ಕ್ರಿಮಿಕೀಟಗಳು ; ಸಸಿಯನ್ನು ಎಳೆಹುಲ್ಲೆಗಳು ಸವಿದಂಟುಗಳನ್ನೆಲ್ಲಾ ಆಕಳುಗಳು, ಬೆಳೆಗಳನ್ನೆಲ್ಲಾ ಹೆಗ್ಗಣಗಳು ತಿಂದು "ಕಾವ್ಯ ಬಸವಂತರೆಲ್ಲರಂ ಸರ್ಪಸಂತತಿ ತಿಂದು, ತಾಳಪಟಂ ಮಾಡೆ ನಾಡೆಲ್ಲವಂ ಗೋಳಿಡಿಸುತಿರ್ಪವೇ ವಣ್ಣಿಸುವೆನು" ಎನ್ನುವಲ್ಲಿ ರಾಘವಾಂಕ ವರ್ಣಿಸಿರುವ ಪ್ರಜಾಶೋಷಣೆಯ ಚಿತ್ರದಟ್ಟವಾಗಿ ಒಡಮೂಡಿದೆ. ಇಂತಹ ನೀಚ ಮುನಿಯ ಬಗೆಗೆ ನಾನು ಹೇಗೆ ವರ್ಣಿಸಲಿ ? ಏನು ವರ್ಣಿಸಲಿ ? ಎಂದು ಕೇಳಿಕೊಳ್ಳುವ ಕವಿಯ ಪ್ರಶ್ನೆಗಳಲ್ಲಿ ನೋವನ್ನು ಮೀರಿದ ತುಡಿತವಿದೆ. ವಿಶ್ವಾಮಿತ್ರನಂತಹ ಮುನಿಗಳ ಮೇಲ್ವರ್ಗದವರ ಹುನ್ನಾರವನ್ನು ಬಯಲು ಮಾಡುವ ಪ್ರಯತ್ನವಿದೆ. ಅದಕ್ಕೇ ಆತ ಮುಂದಿನ ಪದ್ಯದಲ್ಲಿ ಪ್ರಜೆಗಳ ಮುಖಾಂತರ ವಿಶ್ವಾಮಿತ್ರನ ವಿಶ್ವಾಸ ಘಾತಕತನವನ್ನು ಹೊರ ಹಾಕಿಸಿದ್ದಾನೆ.

"ಪಾಪಿ ನಿಷ್ಕರುಣಿ ನಿರ್ದಯ ಮೂರ್ಖ ನೀಚ ನೀರಸನಿರ್ಗುಣ
ನೆರೆಕೊಂಡೆ ನಂಬಿ ನಚ್ಚಿರ್ದರೆಮ್ಮೊಡಲೊಳ
ಛುರಿಯುರುತಿಪ್ಪಳು ಬೇಗೆಯ ಬೆಂಕಿಯುರಿ ನಿನ್ನ
ನರಿಯದೇ ಹೇಳು ವಿಶ್ವಾಮೃತ್ಯುವಾದೆ ವಿಶ್ವಾಮಿತ್ರ ಎನುತಿರ್ದರು"

ತಾನುನಿಂತ ನೆಲವೇ ಕುಸಿಯುವ ಮತೀಯ ವ್ಯವಸ್ಥೆಯಲ್ಲೇ ಬೆಳೆದಾಗ್ಯೂ ರಾಘವಾಂಕ ಜನಪರ ನಿಲುವು ತಾಳುವುದರಿಂದ ಆತನ ಕೃತಿ ಇಂದಿಗೂ ಅಧ್ಯಯನಯೋಗ್ಯ ವಾಗುತ್ತದೆ.

ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಹೊಲತಿಯರ ಪ್ರಸಂಗ ನಮಗಿಂದು ತೀರಾ ಮುಖ್ಯವೆನಿಸುತ್ತದೆ. ರಾಘವಾಂಕ ಹೇಳುವಂತೆ ಇಲ್ಲಿನ ಹೊಲತಿಯರು ವಿಶ್ವಾಮಿತ್ರನ ಹೊಲೆತನದಿಂದ ಹುಟ್ಟಿದವರು. ಬದ್ಧ ದ್ವೇಷ - ಅತಿಕೋಪ ಇವೇ ಮುನಿಗೆ ಹೊಲೆ. ಇಂತಹ ಹೊಲೆತನದಿಂದಲೇ ಹೊಲತಿಯರು ಹುಟ್ಟಿದ್ದರು ಎಂಬುದು ರಾಘವಾಂಕನ ಅಭಿಪ್ರಾಯ. ಆದರೆ ಇದು ಅವಾಸ್ತವ. ಪ್ರಗತಿಪರ ವಿಚಾರದವರಾರೂ ಈ ಮಾತನ್ನು ಒಪ್ಪದಿಲ್ಲ. ಹಾಗಾದರೆ ಹೊಲತಿಯರು ಯಾರು ? ವಿಶ್ವಾಮಿತ್ರನ ನಿಜ ವಾದ ಹೊಲತನವೆಂದರೆ ಯಾವುದು ? ಈ ಎರಡು ಪ್ರಶ್ನೆಗಳಿಗೆ, ಕೂಲಂಕುಷವಾಗಿ ವಿಚಾರಿಸಿಕೊಂಡಾಗ ನನಗನ್ನಿಸಿದ್ದು ಹೀಗೆ—

ದೇವೀಭಾಗವತದಲ್ಲಿ ವಿಶ್ವಾಮಿತ್ರನಿಂದ ಕಾಮಿತಳಾಗಿದ್ದ ಒಬ್ಬ ಸುಂದರಿಯ ಪ್ರಸ್ತಾಪ ಬರುತ್ತದೆ.

> "ರಾಜನ್ ಮಾಂ ಬಾದತೇತ್ಯರ್ಥಂ ವಿಶ್ವಮಿತ್ರೋಮಹಾಮುನಿ :,
> ತಪ : ಕರೋತಿ ಯುದ್ಘೋರಂ ಮದರ್ಥಂ ಕೌಶಿಕೋವನೇ : :
> ತೇನಾಹಂ ದುಃಖಿತಾ ರಾಜನ್ ವಿಪಯೇ ತವಸುವ್ರತ :
> ವಿದ್ಧಿ ಮಾಂ ಕಮನಾಂ ಕಾಂತಾಂ ಪೀಡಿತಾಂ ಮುನಿನಾಭೃಶಂ ; :

ನಾವು ವಾಸ್ತವವಾಗಿ ವಿಚಾರಿಸಿದಾಗ ಎರಡು ಅಂಶಗಳು ಸ್ಪಷ್ಟವಾಗುತ್ತವೆ. ವಿಶ್ವಾಮಿತ್ರ ಕಾಮಿಸಿದ ಹೆಂಗಸು ಹೊಲತಿ. ಆಕೆಗೆ ವಿಶ್ವಾಮಿತ್ರನಿಂದ ಹುಟ್ಟಿದ ಈ ಇಬ್ಬರು ಹೆಣ್ಣು ಮಕ್ಕಳೇ ಹೊಲತಿಯರಾಗಿರಬೇಕು. ಹೊಲತಿಯೊಬ್ಬಳನ್ನು ಕಾಮಿಸಿ ಅವಳಿಂದ ದೈಹಿಕ ಸುಖವನ್ನನುಭವಿಸಿದ ವಿಶ್ವಾಮಿತ್ರ ತನ್ನಿಂದ ಹುಟ್ಟಿದ ಹೊಲತಿ - ಮಕ್ಕಳನ್ನು ತನ್ನ ಸ್ವಾರ್ಥಕ್ಕೆ ಉಪಯೋಗಿಸಿಕೊಂಡಿರಬೇಕು. ಮಂತ್ರ ಕೋಪದಿಂದ ಹುಟ್ಟುವುದು ಅಸಹಜ ಮತ್ತು ಅಸತ್ಯ. ಮಹಾಭಾರತದ ಪಾತ್ರಗಳ ಹುಟ್ಟನ್ನು ಎಸ್. ಎಲ್. ಭೈರಪ್ಪನವರು 'ಪರ್ವ' ದಲ್ಲಿ ವಿಶ್ಲೇಷಿಸಿರುವ ಹಿನ್ನಲೆಯುಲ್ಲಿ ರಾಘವಾಂಕನ ಹೊಲತಿಯರನ್ನು ವಿಶ್ಲೇಷಿಸಿದಾಗ, ನಾನು ಊಹಿಸಿದ ಮೇಲಿನ ವಿಚಾರ ವಾಸ್ತವವೆನ್ನಿಸಬಹುದು.

ಈ ಬ್ರಾಹ್ಮಣರು ಮತ್ತು ಕ್ಷತ್ರಿಯರು, ಶೂದ್ರರನ್ನು ಹೇಗೆ ಮತ್ತು ಎಷ್ಟು ಜಾಣತನದಿಂದ ಶೋಷಣೆ ಮಾಡಿದರು ಎಂಬುದಕ್ಕೆ ವಿಶ್ವಾಮಿತ್ರ ಮಹಾಮುನಿಯ

ಹಾದರದ ಚಿತ್ರವೊಂದೇ ಸಾಕು. ಜನರೆದುರಿಗೆ ದಲಿತರನ್ನು ಮುಟ್ಟುವುದು ಇವರಿಗೆ ಮಹಾಪಾಪ. ಆದರೆ ಕಳವಿನಿಂದ ಹಾದರ ಮಾಡಿ ಹೊಲತಿಯರ ದೈಹಿಕ ಸುಖ ಅನುಭವಿಸುವುದು ಪಾಪವಲ್ಲ. ವಿಶ್ವಾಮಿತ್ರ ಹಾರವರ ಪ್ರತಿನಿಧಿಯಾಗಿ ತನ್ನ ಮಹಾ ಪವಾಡಗಳನ್ನು ತೋರಿಸಿದ್ದಾನೆ. ದೇವಿಭಾಗವತದಲ್ಲಿ ಹೇಳುವ ಹಾಗೆ ಒಬ್ಬ ಸುಂದರಿಯನ್ನು ಕಾಮಿಸಿದ. ಇದು ಶೋಷಣೆಯ ಒಂದು ಮುಖ. ಕಾಮಿಸಿದ ಸುಂದರಿಯಿಂದ ಹುಟ್ಟಿದ ಹೊಲತಿಯರನ್ನು ತನ್ನ ಈರ್ಷೆಗಾಗಿ ಉಪಯೋಗಿಸಿಕೊಂಡದ್ದು ಶೋಷಣೆಯ ಎರಡನೇ ಮುಖ.

ವಿಶ್ವಾಮಿತ್ರನಿಗೆ ನಿಜವಾಗಿಯೂ ಹೊಲತಿಯರನ್ನು ಹರಿಶ್ಚಂದ್ರನೊಡನೆ ವಿವಾಹ ಮಾಡಿಸುವ ಇಚ್ಛೆಯಿಲ್ಲ, ವಿಶ್ವಾಮಿತ್ರನಿಗೆ ದೈಹಿಕ ಸುಖ ಅನುಭವಿಸುವಾಗ ಕಾಣದ ಹೊಲೆತನ, ಜನತೆಯ ಎದುರು ತಾನೊಬ್ಬ ರಾಜರ್ಷಿ ಎಂದು ಜಂಬಕೊಚ್ಚಿಕೊಳ್ಳುವ ಸಂದರ್ಭದಲ್ಲಿ ಕಾಣಿಸುತ್ತದೆ. ಇದೆಲ್ಲಾ ಹರಿಶ್ಚಂದ್ರನ ಹೆಸರಿಗೆ ಮಸಿ ಬಳಿಯುವ ಪ್ರಯತ್ನ. ವೈದಿಕ ಪರಂಪರೆಯಲ್ಲೇ ಬೆಳೆದುಬಂದ ಹರಿಶ್ಚಂದ್ರ ಹೊಲತಿಯರನ್ನು ಮುಟ್ಟಲಾರಯೆಂಬುದು ವಿಶ್ವಾಮಿತ್ರನಿಗೆ ಮೊದಲೇ ಗೊತ್ತಿದ್ದ ವಿಷಯ. ತನಗೆ ಗೊತ್ತಿದ್ದ ಇವೆಲ್ಲ ಅಂಶಗಳನ್ನು ತನ್ನ ಸ್ವಾರ್ಥಸಾಧನೆಗೆ ಉಪಯೋಗಿಸಿಕೊಂಡಾಗ್ಯೂ ಕೊನೆಗೂ ವಿಶ್ವಾಮಿತ್ರ ಸೋಲುತ್ತಾನೆ. ಇದು ರಾಘವಾಂಕನಲ್ಲಿ ನಾವು ಮೆಚ್ಚುವ ಅಂಶ. ಇದು ರಾಘವಾಂಕನ ಜನಪರ ನಿಲುವಿಗೆ ಹಿಡಿದ ಕನ್ನಡಿ.

ಈ ಕಾವ್ಯದಲ್ಲಿ ಬರುವ ಹೊಲತಿಯರ ಸ್ಥಿತಿ ಶತಮಾನಗಳಿಂದ ದಲಿತರಿಗಾದ ಅನ್ಯಾಯ - ಶೋಷಣೆಯನ್ನು ಬಿಚ್ಚಿ ತೋರಿಸುತ್ತದೆ. ಇಲ್ಲಿನ ಹೊಲತಿಯರು ವಿಶ್ವಾಮಿತ್ರನಂತಹ ಮುನಿಯಿಂದ ತಮಗೆ ತಿಳಿಯದಂತೆಯೇ ಶೋಷಿಸಲ್ಪಟ್ಟಿದ್ದರೆ, ವಶಿಷ್ಠನೆಂಬ ವೈದಿಕ ಸಾರಥಿಯ ಮಾತನ್ನು ಮೀರದ ಹರಿಶ್ಚಂದ್ರನಿಂದ ಅವಮಾನಿತರಾಗಿದ್ದಾರೆ. ವಶಿಷ್ಠ - ವಿಶ್ವಾಮಿತ್ರರ ಈರ್ಷೆಯ ತೀಟೆಗೆ ಹರಿಶ್ಚಂದ್ರ ಬಲಿ ಪಶುವಾದರೆ, ಇವರೆಲ್ಲರಿಂದಲೂ ಸೋಷಿಸಲ್ಪಟ್ಟವರು ಹೊಲತಿಯರು. ಕವಿಯ ಕನಿಕರವನ್ನು ಕೂಡ ಕಳೆದುಕೊಂಡ ದಾರುಣ ಸ್ಥಿತಿ ಅವರದು. ಕೊನೆಗೆ ಹರಿಶ್ಚಂದ್ರನಿಗೆ ಜಯಲಬಿಸುತ್ತದೆ. ಪರಿಹಾರ ದೊರಕುತ್ತದೆ. ಆದರೆ ಈ ಹೊಲತಿಯರಿಗೆ ? ಈ ಪ್ರಶ್ನೆ ಇಂದಿಗೂ ದಲಿತರ ಬಗೆಗೆ ಪ್ರಶ್ನೆಯಾಗಿಯೇ ಕಾಡುವುದನ್ನು ನೋಡಿದಾಗ ನಮ್ಮ ಇಂಡಿಯಾದಲ್ಲಿ ವೈದಿಕ - ಸಂಸ್ಕೃತಿಯ ಪ್ರಭಾವ ಎಷ್ಟು ದಟ್ಟವಾಗಿದೆಯೆಂಬುದು ಸ್ಪಷ್ಟವಾಗುತ್ತದೆ. ಈ ಮೇಲ್ವರ್ಗದವರ ಈರ್ಷೆಗೆ ತೀಟೆಗೆ - ಮನರಂಜನೆಗೆ ಸರಕಾದ ದಲಿತರಿಗೆ ಕೊನೆಗೆ ಸಿಗುವುದು ಅವಹೇಳನ ಮತ್ತು ದುರಂತ.

ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಹರಿಶ್ಚಂದ್ರ ಮತ್ತು ಹೊಲತಿಯರ ಸಂಭಾಷಣೆಯನ್ನು ಗಮನಿಸಿದಾಗ, ಹೊಲತಿಯರ ಪ್ರಶ್ನೆಗಳಿಗೆ ಹರಿಶ್ಚಂದ್ರನಿಂದ

ಸಮರ್ಪಕ ಉತ್ತರ ಸಿಗದೇ ಇದ್ದುದು ಸ್ಪಷ್ಟವಾಗುತ್ತದೆ. ಇದು ರಾಘವಾಂಕನ ಸೂಕ್ಷ್ಮದೃಷ್ಟಿಗೆ ಉದಾಹರಣೆ. ಹರಿಶ್ಚಂದ್ರ ವೈದಿಕ, ಮುನಿ ವಶಿಷ್ಟನಿಂದ ಪ್ರಭಾವಿತನಾದವ. ವೈದಿಕ ಸಂಸ್ಕೃತಿಯನ್ನು ಒಪ್ಪಿಕೊಂಡವ. ಹೊಲತಿಯರ ಪ್ರಶ್ನೆಗಳಿಗೆ ವೈದಿಕ ಸಂಸ್ಕೃತಿಯಲ್ಲಿ ಉತ್ತರವಿಲ್ಲವಾದಾಗ ಇನ್ನು ಹರಿಶ್ಚಂದ್ರ ತಾನೆ ಹೇಗೆ ಸಮರ್ಪಕ ಉತ್ತರ ಕೊಡಲು ಸಾಧ್ಯ ? ಹರಿಶ್ಚಂದ್ರ ಕಾವ್ಯವನ್ನು ವಿಮರ್ಶೆ ಮಾಡಿದ ನಮ್ಮ ಕೆಲ ವಿಮರ್ಶಕರು ಹರಿಶ್ಚಂದ್ರ ಹೊಲತಿಯರ ಸಂಭಾಷಣೆ ಬಹಳ ಸುಂದರವಾಗಿದೆ – ಎಂದು ವರ್ಣಿಸಿದ್ದಾರೆಯೇ ವಿನಃ ಅದರ ಹಿಂದೆ ಅಡಗಿರುವ ಯಜಮಾನ ಸಂಸ್ಕೃತಿಯು ಉಸಿರುಕಟ್ಟಿಸುವ ಯತ್ನವನ್ನು ಹೇಳಿಲ್ಲ.

ವಿಶ್ವಾಮಿತ್ರ ಏನು ಕೇಳಿದರೂ ಕೊಡಲು ಸಿದ್ಧನಾಗುವ ಹರಿಶ್ಚಂದ್ರ ಹೊಲತಿಯರ ನೃತ್ಯವನ್ನು ಮೆಚ್ಚಿ ಅವರು ಕೇಳಿದ ಮುತ್ತಿನ ಸತ್ತಿಗೆ ಕೊಡಲು ತಿರಸ್ಕರಿಸುತ್ತಾನೆ. ಉಚ್ಚವರ್ಗದ – ಪಂಡಿತ ಸಂಸ್ಕೃತಿ ಜನ ಸಾಮಾನ್ಯರಲ್ಲಿ ಮತ್ತು ರಾಜರಾದವರಲ್ಲಿ ಹೇಗೆ ಭಯ ಹುಟ್ಟಿಸುತ್ತದೆ. ಎಂಬುದು ಈ ಸನ್ನಿವೇಶದಿಂದ ಸ್ಪಷ್ಟವಾಗುತ್ತದೆ. ಹೊಲತಿಯರು ಎಂದರೆ ಇಲ್ಲಿ ಹರಿಶ್ಚಂದ್ರನಿಗೂ ನಿರ್ಲಕ್ಷ್ಯ. ಇದೇ ಮುತ್ತಿನ ಸತ್ತಿಗೆ ವಿಶ್ವಾಮಿತ್ರ ಕೇಳಿದರೆ ಪಾದಕ್ಕೆ ಒಪ್ಪಿಸುತ್ತಾನೆ. ಅಲ್ಲಿಯ ಪ್ರಜೆಗಳೆಲ್ಲ ಕಷ್ಟಪಡಲಿಕ್ಕೆ ತೊಂದರೆ ಅನುಭವಿಸಲಿಕ್ಕೆ ಮುಖ್ಯ ಕಾರಣವಾದದ್ದು ಉಚ್ಚವರ್ಗದವರ ಈರ್ಷೆಯಿಂದ. ವಿಶ್ವಾಮಿತ್ರನಿಗೆ ಕೊಡುವ ಗೌರವವನ್ನು ಹೊಲತಿಯರ ಮಾತಿಗೂ ಕೊಟ್ಟಿದ್ದರೆ ಹರಿಶ್ಚಂದ್ರ ಪರಿತಪಿಸಬೇಕಾದ ಕಾರಣವಿರುತ್ತಿರಲಿಲ್ಲ. ಮುತ್ತಿನ ಸತ್ತಿಗೆ ಕೊಡದೇ ಹೋದಾಗ ಹೊಲತಿಯರು ಹರಿಶ್ಚಂದ್ರನಿಗೆ ವಲ್ಲಭನಾಗು ಎಂದು ವಿನಂತಿಸಿಕೊಳ್ಳುತ್ತಾರೆ.

ಅಂದಿನ ಕಾಲದಲ್ಲಿ ಒಬ್ಬ ಅರಸನಿಗೆ ಹಲವಾರು ರಾಣಿಯರಿರುವುದು ಸಹಜ ಮತ್ತು ಅದು ಅವರ ಅಂತಸ್ತನ್ನು ಹೆಚ್ಚಿಸುವ ವಿಷಯ. ಹೊಲತಿಯರ ಈ ಮಾತಿನಲ್ಲಿ ಯಾವ ಅಸಹಜತೆಯೂ ಇಲ್ಲ. 'ನಮಗೆ ವಲ್ಲಭನಾಗು' ಎಂದಾಕ್ಷಣ ಹರಿಶ್ಚಂದ್ರನ ಕೋಪನೆತ್ತಿಗೇರುತ್ತದೆ. ಆ ಕೋಪವನ್ನು ತಣ್ಣಗಾಗಿಸಲು ಹೊಲತಿಯರಿಂದ ಬರುವ ಮಾತುಗಳು ಬಹಳ ಮುಖ್ಯವಾದವುಗಳು. ನಾವು ಹೊಲತಿಯರಾದರೂ ನಮಗೆ ಗುಣ ರೂಪ - ಯೌವನವಿಲ್ಲವೆ ? ಎಂದು ಪ್ರಶ್ನಿಸುತ್ತಾ ಪವಿತ್ರ ಹಾಲು ಬರುವುದು ಕೆಚ್ಚಲ ಮಾಂಸದಿಂದ, ಸಿಹಿ ಜೇನು ಸಿಗುವುಗು ನೊಣಗಳಿಂದ, ಸುವಾಸನೆಯ ಕಸ್ತೂರಿ ಮೃಗನಾಭಿಯಿಂದ ಬರುತ್ತದೆ. ಹಾಗಿರುವಾಗ ನಮ್ಮ ರೂಪ-ಯೌವನದ ಮುಂದೆ ಕುಲದ ಮಾತೇಕೆ ? ಎನ್ನುತ್ತಾರೆ. ಮಾನವೀಯ ತುಡಿತವುಳ್ಳ ಯಾವ ಮನುಷ್ಯನೂ ಒಪ್ಪಬೇಕಾದ ಮಾತುಗಳಿವು. ಆದರೆ ಇದಕ್ಕೆ ಹರಿಶ್ಚಂದ್ರ ಕೊಡುವ ಉತ್ತರ ಇವರ ಪ್ರಶ್ನೆಗೆ ಸಂಬಂಧವೇ ಇಲ್ಲದ್ದು, ವೈದಿಕದ ಬೊಗಳೇತನದಿಂದ ಬಂದ ಬರೀ ಒಣ ತರ್ಕವಾಗಿದೆ.

ಬಚ್ಚಲು ನೀರು ತಿಳಿಯಾದರೆ ಸ್ನಾನಕ್ಕೆ ಬರಬಲ್ಲದೆ ? ನಾಯಿಯ ಹಾಲು ಊಟಕ್ಕೆ ಬರಬಲ್ಲದೆ ? ಸ್ಮಶಾನದಲ್ಲಿ ಬೆಳೆದ ಹೂ ಮುಡಿಯಲು ಯೋಗ್ಯವೆ ? ಎಂದು ಹರಿಶ್ಚಂದ್ರ ಸಮರ್ಥಿಸಿಕೊಳ್ಳುವ ಮಾತುಗಳು, ಹೊಲತಿಯರ ಪ್ರಶ್ನೆಗಳಿಗೆ ನಿಜವಾದ ಉತ್ತರಗಳಾಗಲಾರವು. ಬಚ್ಚಲ ನೀರು, ನಾಯಿಯ ಹಾಲು, ಸ್ಮಶಾನದ ಹೂವನ್ನು ಹೊಲತಿಯರಿಗೆ ಆತ ಹೋಲಿಸುವುದನ್ನು ನೋಡಿದರೆ, ಚತುರ್ವರ್ಣದ ಅಮಾನವೀಯತೆ ಯಲ್ಲಿ ಆತ ಮುಳುಗಿ ಹೋಗಿರುವುದು ಸ್ಪಷ್ಟವಾಗುತ್ತದೆ. ನಾಯಿಗೂ - ಹೊಲತಿ ಯರಿಗೂ ಸಂಬಂಧವೇ ಇಲ್ಲ. ನಾಯಿ – ಪ್ರಾಣಿ, ಹೊಲತಿಯರು ಹರಿಶ್ಚಂದ್ರ ನಂತೆಯೇ ಮನುಷ್ಯರು, ಹೊಲತಿಯರನ್ನೂ ನಾಯಿಗೆ ಹೋಲಿಸಿದರೆ, ತಾನು ನಾಯಿಯೇ ಆಗುತ್ತೇನಲ್ಲಾ ಎಂಬ ಅರಿವು ಆತನಿಗಿರಲಿಲ್ಲ. ಇದಕ್ಕೆ ಪ್ರಮುಖ ಕಾರಣ ಆತ ದಟ್ಟವಾಗಿ ನಂಬಿರುವ ವೈದಿಕ ತತ್ವಗಳ ಗೊಡ್ಡು ಸಂಸ್ಕೃತಿ. ಇಷ್ಟಕ್ಕೆ ಹೊಲತಿ ಯರು ಬಿಡುವುದಿಲ್ಲ. ಹೊಲೆ ಶಬ್ದವನ್ನು ಆತ ಪದೇ – ಪದೇ ಬಳಸಿದಾಗ ಅವರು ಸ್ಪಷ್ಟವಾಗಿ ಕೇಳುತ್ತಾರೆ.

ಹಾಡನು ಕೇಳಿದ ಕಿವಿಗೆ ಹೊಲೆಯಿಲ್ಲ. ಮಾತಾಡಿ ಹೊಗಳಿದ ಬಾಯಿಗೆ ಹೊಲೆಯಿಲ್ಲ, ರೂಪ ನೋಡಿದ ಕಣ್ಣಿಗೆ ಹೊಲೆಯಿಲ್ಲ, ಸುಗಂಧವ ವಾಸಿಸಿದ ಮೂಗಿಗೆ ಹೊಲೆಯಿಲ್ಲ, ಕೇವಲ ಮುಟ್ಟುವುದರಿಂದ ಹೊಲೆಯಾಗುತ್ತದೆಯೆ ? ಪಂಚೇಂದ್ರಿಯ ಗಳಲ್ಲಿ ನಾಲ್ಕು ಅಧಮ ಒಂದು ಅಧಿಕವೆ ? ಎನ್ನುವ ಅವರ ಮಾತುಗಳಲ್ಲಿ ದಲಿತರ ನೋವಿನ ಒಟ್ಟು ಆಶಯವಿದೆ, ನೇರಧ್ವನಿಯಿದೆ, ನಿರ್ಭಿಡೆಯ ಸತ್ಯವಿದೆ.

ಈ ಮಾತಿಗೂ ಹರಿಶ್ಚಂದ್ರನಲ್ಲಿ ಉತ್ತರವಿಲ್ಲ. ಕೆಂಡವನ್ನು ಮುಟ್ಟಿದಾಗ ಮಾತ್ರ ಸುಡುತ್ತದೆ. ವಾಸಿಸಿದರೆ, ನೋಡಿದರೆ ಸುಡುವುದಿಲ್ಲ ಎನ್ನುವ ಆತನ ಮಾತಿ ನಲ್ಲಿ ತಪ್ಪಿಸಿಕೊಳ್ಳುವ ನರಿಬುದ್ಧಿ ಇದೆ. ಹೊಲತಿಯರು ಕೆಂಡವಲ್ಲ. ಅವರು ತನ್ನ ಹಾಗೇ ಮನುಷ್ಯರು ಎಂದು ಆತನಿಗೆ ಹೊಳೆಯುವುದು ಸಾಧ್ಯವೇ ಇಲ್ಲ. ನಿಮಗಾಗಿ ನನ್ನ ಕುಲ ಕೆಡಿಸಿಕೊಳ್ಳಲಾರೆ ಎಂದು ಸ್ಪಷ್ಟಪಡಿಸುತ್ತಾನೆ. 'ಪಾಪಿಗಳ ಪಾಪಂ ತೊಳೆವ ಗಂಗೆಗೆ ಪಾಪ ಲೇಪವುಂಟಾಯ್ತು ಹೇಳರಸ' ಎಂದು ಕೇಳುವ ಹೊಲತಿ ಯಾರ ಮಾತಿ ನಲ್ಲಿ ವಿಶಾಲತೆಯಿದೆ, ತ್ಯಾಗದ ಕೊನೆಯ ಹಂತವಿದೆ. ತಾವು ಪಾಪಿಗಳು ಎಂಬುದನ್ನು ಅನಿವಾರ್ಯವಾಗಿ ಒಪ್ಪಿಕೊಂಡು ಹರಿಶ್ಚಂದ್ರನಿಗೆ ಗಂಗೆಯ ಪವಿತ್ರ ಸ್ಥಾನವನ್ನು ಕಲ್ಪಿಸಿ ಕೊಡುತ್ತಾರೆ. ಬ್ರಾಹ್ಮಣರ ನೀಚ ಸಂಸ್ಕೃತಿಯಲ್ಲಿ ಬೆಳೆದ ಹರಿಶ್ಚಂದ್ರನಿಗೆ ಹೊಲತಿ ಯರ ಅಂತರಂಗದ ಕೂಗು ಕೇಳಿಸದಂತಾಗುತ್ತದೆ ಅವರ ಮನದ ತುಡಿತ, ಸಮಾನತೆಯ ಅರ್ಥ ಆತನಲ್ಲಿ ನಿರರ್ಥಕವಾಗುತ್ತವೆ. ಕೊನೆಗೆ ಅವರು ಬಿಡದೆ ಹಟಮಾಡಿದಾಗ, ಹಲ್ಲು ಮುರಿಯುವಂತೆ, ಬಾಯಿ ಹರಿದು ರಕ್ತ ಸೋರುವಂತೆ ಚಾಟಿಯಿಂದ ಹೊಡೆಯು ತ್ತಾನೆ. ಮಾನವೀಯತೆಗೆ ಹರಿಶ್ಚಂದ್ರನಿಂದ ಸಿಗುವ ಉತ್ತರವಿದು.

ಇದರಲ್ಲಿ ಹರಿಶ್ಚಂದ್ರನ ಬಗೆಗೆ ಓದುಗರಿಗೆ ಕೊಂಚವೂ ಸಿಟ್ಟು ಬರುವುದಿಲ್ಲ. ಕಾರಣ ಈ ಹೊಲತಿಯರು ವಿಶ್ವಾಮಿತ್ರನಿಂದ ಕಳಿಸಲ್ಪಟ್ಟವರು. ವಿಶ್ವಾಮಿತ್ರನ ವೈದಿಕ ಬುದ್ಧಿಯೇ ಹರಿಶ್ಚಂದ್ರನಲ್ಲೂ ಕೆಲಸ ಮಾಡಿದೆ. ಹೀಗಾಗಿ ಹೊಲತಿಯರಿಗೆ ಇತ್ತ ವಿಶ್ವಾಮಿತ್ರನೂ ಇಲ್ಲ, ಅತ್ತ ಹರಿಶ್ಚಂದ್ರನೂ ಇಲ್ಲ. ಎಲ್ಲರಿಂದಲೂ, ಎಲ್ಲದರಿಂದಲೂ ವಂಚಿತರಾದರವರು. ಈ ಚಿತ್ರಣವನ್ನು ರಾಘವಾಂಕ ತನ್ನ ಕಾವ್ಯದಲ್ಲಿ ಮನಮುಟ್ಟುವಂತೆ ಬಿಂಬಿಸಿದ್ದಾನೆ. ಹೊಲತಿಯರಿಂದ ಆತ ಆಡಿಸುವ ಪ್ರತಿಮಾತಿನಲ್ಲೂ, ಶತಮಾನಗಳ ದಟ್ಟ – ನೋವು ಅಡಗಿದೆ. ಕಡೆಗಣಿಸಲ್ಪಟ್ಟವರ ಧೈರ್ಯವಿದೆ. ಪಶು – ಪ್ರಾಣಿಗಳಂತೆ ಬದುಕಿದ ದಲಿತರ ಧ್ವನಿಯಿದೆ. ತನ್ನ ವಿಷದ ನಾಲಗೆಯನ್ನು ಭಯಂಕರವಾಗಿ ಚಾಚುತ್ತ ಬಂದಿರುವ ವೈದಿಕ ಸಂಸ್ಕೃತಿಯ ಹಾದರದ ಸಮುದ್ರದಲ್ಲಿ ಹೊಲತಿಯರಂತವರು ಪ್ರತಿಭಟಿಸಿದ್ದು ಸಮಾನತೆಗೆ ಹಾತೊರೆದದ್ದು ಕೇವಲ ಮನರಂಜನೆಯಾಗಿ ಇತಿಹಾಸದುದ್ದಕ್ಕೂ ಬಿದ್ದುಕೊಂಡಿದೆ. ಪ್ರತಿಯೊಂದನ್ನು ಮಾನವೀಯತೆಯಿಂದ - ವೈಚಾರಿಕತೆಯಿಂದ ನೋಡಿದಾಗ ಮಾತ್ರ ನಿಜವಾದ ಸೋಗಲಾಡಿತನ ಹೊರಗೆ ಬರುತ್ತದೆ. ಶತಮಾನಗಳ ಶೋಷಣೆಯ ಸಂಕೇತವಾಗಿ ಹೊಲತಿಯರು ಹರಿಶ್ಚಂದ್ರ ಕಾವ್ಯದಲ್ಲಿ ಸ್ಪಷ್ಟವಾಗಿ ಗುರುತಿಸಲ್ಪಟ್ಟಿದ್ದಾರೆ. ಇಂತಹ ಹಳೆಯ ಕಾವ್ಯವನ್ನು ದೀರ್ಘವಾಗಿ ಆಲೋಚಿಸುವುದರ ಮೂಲಕ ಹೊಸ ದಿಕ್ಕುಗಳನ್ನು ಕಂಡುಕೊಳ್ಳಬೇಕಾಗಿದೆ.

**ಅಡಿ ಟಿಪ್ಪಣಿಗಳು :**

1) ಹರಿಶ್ಚಂದ್ರ ಕಾವ್ಯ ಸಂಗ್ರಹ, ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿ, ಪುಟ – 17

2) ಹರಿಶ್ಚಂದ್ರ ಕಾವ್ಯ ಸಂಗ್ರಹ, ಸಂಪಾದಕರು, ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿ, ಪುಟ – 61

3) ದೇವೀಭಾಗವತ, ಸ್ಕಂದ 7 ಅಧ್ಯಾಯ 18, ಶ್ಲೋಕ 7 - 8

# ತಿಂಗಳ ಕಾವ್ಯ

## ತಾಯಿ

1

ಹೆರುವ ಯಂತ್ರವಾಗಿ ಸುಕ್ಕುಗಟ್ಟಿದೆಯವ್ವ
ತೊಗಲು ಬಿದ್ದವು ಜೋತು ;   ಜರಡಿಯಾದವು
ಎಲುಬುಗೂಡು; ಹಾಸಿದ ಹೊಲದ ಸೆರಗಲ್ಲಿ
ತೆನೆ ತೆನೆ ತೆತ್ತು ಸೆಗಣಿ ಮೈ ಹೊತ್ತೆಯವ್ವ

ನೆಲದ ಗವ್ವಾದೆ; ಕಪಿಲೆ ಕೊರಳಲ್ಲಿ
ಎಣ್ಣೆ ತೆಗೆದೆ;
ಬೋಳಾದ ಬಾಯಲ್ಲಿ ಗೋಟಡಿಕೆ ನೆನೆಸಿ
ಕುಟ್ಟಾಣಿಯಲ್ಲಿ ಕವಳ ಕುಟ್ಟುತ್ತಿರುವೆ
ಹಣ್ಣು ಹಣ್ಣಾದ ಕಣ್ಣಲ್ಲಿ ನಿನ್ನ ಬಿಸಿಲಿಗೆ
ಮೈ ಕಾಯಿಸಿರುವೆ
ಕವಳ ತುಂಬಿದ ಬಾಯಿ ಪಿಚಕಾರಿ ಕೆಂಪು
ಜೊಲ್ಲು
ದುಡಕಿ ಬಿದ್ದಂತೆ ಜೋಗಲ್ಲಿ ನೀರು
ಈಗಿದ್ದ ನೀರು ಈಗಿಲ್ಲ; ನಿನ್ನ ಮಕ್ಕಳ
ಕಣ್ಣಲ್ಲಿ ನೀನಾದೆ ಅಜ್ಞಾತ.

2

ನಿನ್ನ ಯೌವನದಲ್ಲಿ ಮಕ್ಕಳಿಲ್ಲದ ಚಿಂತೆ
ಸುಡುಗಾಡು ಕಲ್ಲುಗಳಿಗೆ ನಿನ್ನ ಸೇವೆ
ಬೆನ್ನ ಹುರಿಯಲ್ಲಿ ಬಿತ್ತು ಬಂಜೆಯು ಪೆಟ್ಟು

ಊರವರ ಬಾಯಲ್ಲಿ ಹುಳಬಿದ್ದ ಹೊಲಸು
ದಿಕ್ಕು ದಿಕ್ಕಿಗೆ ಚದುರಿದ ಮೋಡ
ಒಟ್ಟಾಗಿ ಸುರಿದಿತ್ತು ಧಾರಾಕಾರ
ಹದನಾದ ನೆಲ ಹೀರಿ ನೀರನ್ನೆಲ್ಲ
ಬೀಜ ಬೀಜಕ್ಕೆ ರಕ್ತ ಸಂಚಾರ

ವರ್ಷ ವರ್ಷವೂ ಸುಲಿಗೆಗೊಳಗಾದೆ ತಾಯಿ
ಕಾಳು ಕೂಳೆಯೂ ಬಿಡದಂತೆ ದೋಚಿ
ಉಳಿದಿರುವೆ ನೀನಿನ್ನೂ ಬರಡು ಬರಡಾಗಿ
ಗೊಡ್ಡು ಕಪಿಲೆಯೊಂದೇ ಸಧ್ಯ ಸಂಗಾತಿ

ಗೂಟಕ್ಕೆ ಬಿಗಿ ಬಿಗಿದ ಕರುವಾದೆ
ಕಸ ಕಾಳು ಕಡ್ಡಿ, ತೊಪ್ಪೆ ತುಂಬಿದ ಕುಪ್ಪೆ
ಹೊತ್ತು ಕಾಡು ಸೌದೆ; ತುತ್ತ ಎಸರು ಮುದ್ದೆ
ಮೈಯೊಡ್ಡಿ ತೆಗೆದಿರುವೆ ಜಾವನಿದ್ರೆ

3

ಪೆಯಲ್ಲಿ ಸುದ್ದಿ ಬರುವುದಿಲ್ಲ
ನಿನ್ನ ಅಜ್ಞಾತ ದುಡಿತಕ್ಕೆ ದಿಳ್ಳಿ ದೌಲತ್ತು ಇಲ್ಲ
ಎಲ್ಲೋ ಹುಟ್ಟಿಲ್ಲಿ ಸಾಯುವ ಸೂರ್ಯ
ಪುಳಕ ತರುವುದಿಲ್ಲ
ಈ ಹಟ್ಟಿ ಬೆಟ್ಟ ಕಾಡು ಗುಡ್ಡಗಳ
ಸಾಗಂತ್ಯ ನೀ ಬಿಡುವುದಿಲ್ಲ
ನಿನ್ನ ಮುದ್ದು ಕಡಸು ಬಾರದಿದ್ದರೆ ಸಂಜೆ
ಕಾಡು ಕತ್ತಲಲ್ಲಿ ಸುತ್ತಿ ಬರುವೆ
ಸಿಕ್ಕ ಕಡಸಿಗೆ ಕಲಗಚ್ಚು ಹಿಡಿದು
ಬಳಿಯಲ್ಲಿ ಬಿಕ್ಕುತ್ತ ಕುಳಿತು ಬಿಡುವೆ

ಇಡಿ ರಾತ್ರಿ ಗೋಡೆಗಳಲ್ಲಿ ಬುಡ್ಡಿದೀಪದ
ನೆರಳು ತಕಪಕನೆ ಕುಣಿಯುತ್ತವೆ
ಕೊಟ್ಟಿಗೆಯಲ್ಲಿ ದನಕರುಗಳ ಸಡಫಡ ನಿನ್ನ

ಎಚ್ಚರಿಸುತ್ತವೆ
ಮಗ್ಗಲು ಬದಲಾಯಿಸಿದರಷ್ಟೆ ಬೆಳಕು
ಮತ್ತೆ ಒದ್ದೆ ಸೌದೆ ಒಲೆ ಹಿಟ್ಟು ಮಡಿಕೆ ನೆನಪು

—ಎಂ. ಎಸ್. ನ್ಯಾಸರಾವ್

## ಕಾ॥ ಶ್ರೀನಿವಾಸ ಗುಡಿ

ಲಾಂಛನಕ್ಕೆ
ಶರಣೆಂದು
ಬದುಕಿನುದ್ದಕ್ಕೂ
ದುಡಿದಿರಿ ನೀವು

ಆದರೆ
ತಪ್ಪಿ ನಡೆದವರಿಗೆ
'ಚೀಃ' ಎನ್ನದೆ
ಹೋದಿರಿ

ಪಾರ್ಟಿಹಡಗು
ಕತ್ತಲೆಯಿಂದ
ಬೆಳಕಿನೆಡೆಗೆ
ಹೋಗಬೇಕು ಎಂದು
ಸದಾ ಚಿಂತಿಸಿದಿರಿ.

ಕಪ್ಪಾನಗಿರಿಯಲ್ಲಿ
ಮೈ ಮರೆತವರನ್ನು
ಮರೆತು,
ಓಡಾಡಿ
ಹಡಗಿನ ತುಂಬ
ಸೆಲೆಯೊಡೆದ
ಜಾಗಗಳಲ್ಲೆಲ್ಲ
ಅಭಯ ಹಸ್ತವನಿಟ್ಟರಿ.

ನಮ್ಮ ಪಕ್ಷ
ಕೃಷ್ಣ ಪಕ್ಷವಲ್ಲ
ಶುಕ್ಲ ಪಕ್ಷವೆಂದು
ತಿಳಿದೂ
ಅಳಿಮನಗಳ ಮುಂದೆ
ಮಾತಾಡಲು
ಅಳುಕಿದಿರಿ

ಹೊಲೆ ಮಾದಿಗರು
ಬೆಳೆವವರು
ಕೊಳೆ ತೆಗೆವವರು
ಗಣಿಯಲ್ಲಿ
ಕಪ್ಪಾಗುವವರು
ಯಂತ್ರಕ್ಕೆ
ಜೀವ ಕೊಡುವವರು
ಪಕ್ಷದ ವಾರಸುದಾರರು–
ಇದು ದಿಟ
ಎಂದು ಗುಣುಗಿದಿರಿ
ಪಾತಾಳದಿಂದತ್ತತ್ತ
ಬದುಕುತ್ತಿರುವವರ



ತೊದ್ರು

ಬಳಗದಲ್ಲಿ ಒಂದಾಗಿ
ಹೋದಿರಿ

'ಮಗು
ಮನುಕುಲದ ತಂದೆ'
ಎನ್ನುತ್ತಾರೆ
ಕೊನೆವರೆಗೂ
'ಮಗು'ವಾಗೇ ಬದುಕಿದಿರಿ

ನಿಮ್ಮ ಮೌನಧ್ವನಿಗೆ
ಭಾಷೆ ಕೊಡುವೆ ನಾನು

ಗುಡಿ ಮಾಮಾ
ತೀರ ನೋವಿನ
ನಾಚಿಕೆಯ
ಎರಡು ಹನಿ
ಕಣ್ಣೀರು ಸ್ವೀಕರಿಸಿ.

—ರಮಜಾನ್ ದರ್ಗಾ

## ಬೆಂದನೆಲದೊಡಲಲಿ...;

ತಲೆಯ ಮೇಲೆ ಸುಡುವ ಬಿಸಿಲಿನ ಕಾವು
ಕಾಲ ಕೆಳಗೆ ಬಿರಿದ ನೆಲದ ನೋವು
ಅವುಗಳೊಡನೆ ಹೇಗೋ ಹೊಟ್ಟೆಹೊಸೆಯುತ್ತ
ಮಲೆಗಳ ನಡುಮಧ್ಯೆ
ಕಾದೂ ಕಾದೂ ಬಿಸಿಯುಸಿರುಗುಳುತ್ತಾ
ನರಳುತ್ತಾ
ಅಂಕುಡೊಂಕಾದ ರಸ್ತೆಯುದ್ದಕೂ
ದ್ವಿಪಾದಿ ನಡೆಯುತ್ತಿರಲು
ಕಂಡದ್ದು : ಬೆಂದನೆಲದೊಡಲಲಿ,
ಹಸಿರು ಚಿಮ್ಮುವ ಭತ್ತದ ತಳಿ
ಅದ ಕಂಡು ಅನಿಸಿದ್ದು :
ಕಾದು ಬಿರಿದ ಭೂಮಿ
ಬಿಸಿಲುಗುಳುವ ಆಕಾಶ
ಈ 'ಎರಡು'ಗಳು ಒಂದರೊಡನೊಂದು
ಬೆರೆತು,
ಕ್ಷಣ ಕಾಲ ಮರೆತು
ಆಕಾಶ ಸುರಿಸಿದ ಹನಿಹನಿಗೆ

ಬಿರಿದ ನೆಲದ ನೋವು ಕರಗಿ
ಕೆಸರಾಗಿಸಿ
ಮನಮೆಚ್ಚಿಸಿ
ಹಸಿರು ಹಡೆದು
ಹೆಸರು ಪಡೆಯುತ್ತದೆ.

—ಸಿ. ವಿ. ಪಾಟೀಲ

## (ದ)ಮನ

ಅಂಗಳದ ಪಕ್ಕದಲ್ಲಿ ಹೊಂಡ
ತೋಡಿ ಸಾಪ್ಸು ಸುಡು
ಮಣ್ಣನಲ್ಲಿ ನೆಟ್ಟಿದ್ದ
ನೇಂದ್ರಬಾಳೆ ಗಡ್ಡೆಯ ಮೊಗ್ಗಿಗೆ
ಅಣ್ಣ ತುಳಿಯುವುದನ್ನು ನೋಡಿದ್ದೆ
ಕೆಲವು ದಿನಗಳ ಹಿಂದೆ
ಪುಡಿ ಪುಡಿಯಾಗಿದ್ದ ಸಸಿ
ಸೊಂಪಾಗಿ ತಲೆಯೆತ್ತುತ್ತಿದೆ
ಸುತ್ತ ನಾಲ್ಕಾರು
ಬೆರಳುದ್ದದ ಅಗೆಗಳು

## ಸಂಭಾವಿತರು

ಇವರದ್ದು ನಿಸ್ಪೃಹ ವ್ಯಕ್ತಿತ್ವ
ನಡೆ ನೇರ
ಹೃದಯ ವಿಶಾಲ
ಮೇಲ್ನೋಟಕ್ಕೆ
ವರ್ತುಲಗಳು

ಶೂದ್ರ

ಬಹಳಷ್ಟು ದೊಡ್ಡದಾದಂತೆ
ನಡುನೆ ನಿಂತ ಹಲವರಿಗೆ
ಅಂಚು
ಸರಳರೇಖೆಯಾಗಿ ಮಾರ್ಪಟ್ಟಂತೆ
ತೋರಿದರೂ
ಕಣ್ಣು ಚೆನ್ನಾಗಿರುವವರಿಗೆ
ಪರಿಧಿಯ ಒಳಬಾಗು
ಗೋಚರಿಸುತ್ತದೆ.

—ಶ್ರೀಕೃಷ್ಣ ಚೆನ್ನಂಗೋಡ್

## ಒಂದು ಮಗುವಿನ ಕಥೆ

ಬೀದಿಯಲ್ಲೊಂದು ಮಗು ಮಲಗಿದೆ
ಹೌದು ಈ ನಾಡಿನ ಒಂದು ಬೀದಿಯಲ್ಲಿ
ಮಗು ಮಲಗಿದೆ.

ಕೈಯುಂಟು ಕಾಲುಂಟು
ದೇಹ ಮಜಬೂತು
ಆದರೆ ಕಣ್ಣುಗಳು ಇಲ್ಲ.

ವಿಶಾಲ ಬೀದಿಯ ಮೈಯಲ್ಲಿ
ಹುಳುಕು ಹಲವಾರು
ಜೇಬುಗಳ ತುಂಬೆಲ್ಲ ಕೊಳಚೆ ನೀರು
ಚಕ್ರಗಳು ಒತ್ತಿ ಮುತ್ತಿಡುವಾಗ
ಮಗುವಿಗೆ ಚಿತ್ರ ಚಿತ್ತಾರದ ಸ್ನಾನ
ಪರಂಗಿಯವನ ಫೋಟೊ ಕ್ಲಿಕ್ಕಿಸಿತು.

ವಾಹನ ಮಾಲೀಕನೊಬ್ಬ
ಫೋನು ಹಚ್ಚಿ ಪೊಲೀಸು ಕಳಿಸಿದ

'ಇದೊಂದು ಅನಿಷ್ಟ'
ಲೊಚಗುಟ್ಟಿ ಮೂಲೆಗೆಳೆದು ಹೊರಟ.

ಮಗು ಕಿರಿಚತೊಡಗಿತು :
'ಕಣ್ಣು ಕೊಡಿ, ಬೆಳಕು ಕೊಡಿ'
ಯಾರೂ ಗಮನಿಸದಂತೆ ತೋರಲಿಲ್ಲ.

ಸಂಜೆ ಭಾಷಣಕ್ಕೆ ಹೊರಟ
ಮಂತ್ರಿ ಕಾರಿಗೆ ಸಿಕ್ಕಿ ಮಗು
ಕಾಲು ಕಳೆದುಕೊಂಡಿತು
ಪತ್ರಿಕೆಗಳು ಡಂಗೂರ ಸಾರಿದವು.

ಸಹಾಯ ಮಾಡಲು ತೀರ್ಮಾನಿಸಿ ಧಾವಿಸಿದೆ.
ಮುಗ್ಧ ಮಗು ನನ್ನತ್ತ ತಿರುಗಿತು
ಇದೇನು ಆಶ್ಚರ್ಯ, ನನ್ನದೇ ಪ್ರತಿಬಿಂಬ !
ಕಂಡು ಬೆರಗುಗೊಂಡೆ—ಎಚ್ಚರಗೊಂಡೆ.

ನಸುಕಿನಲ್ಲಿ
ಬಣ್ಣದ ಟಿ. ವಿ.
ಸ್ವಾತಂತ್ರ್ಯೋತ್ಸವ-38
ಮೊಳಗಿಸುತ್ತಿತ್ತು.

—ಕೆ. ಎಂ. ಮುನಿಕೃಷ್ಣಪ್ಪ

---

ಕಳೆದ ಸಂಚಿಕೆಯಲ್ಲಿ ಕವಿಗಳ ವಿಳಾಸ ಕವನದ ಕೊನೆಯಲ್ಲಿ ಕೊಟ್ಟೆವು. ಆದರೆ ಪುಟಗಳು ಗಲೀಜಾಗಿ ಕಾಣುತ್ತಿದ್ದುದರಿಂದ ಈ ಸಂಚಿಕೆಯಲ್ಲಿ ಕೊಟ್ಟಿಲ್ಲ. ಮುಂದಿನ ಸಂಚಿಕೆಯಲ್ಲಿ ಬೇರೆ ರೂಪದಲ್ಲಿ ಕೊಡಲಾಗುವುದು. ಸಂ.

## ಪುಸ್ತಕ ಪರಿಚಯ

### ಐದು ಮೂಕ ನಾಟಕಗಳು

(ನಾಟಕಕಾರನು ಸಾಮಾನ್ಯವಾಗಿ ದೃಶ್ಯಗಳನ್ನು ಕಲ್ಪಿಸಿಕೊಂಡು ಅವುಗಳಿಗೆ ಅವಶ್ಯವಾದ ಕ್ರಿಯೆಗಳ ಸೂಚನೆಯೊಡನೆ ಸಂಭಾಷಣೆಯನ್ನು ರಚಿಸುತ್ತಾನೆ. ಆದುದರಿಂದ ನಾಟಕಕ್ಕೆ ಅಭಿನಯವೇ ಮುಖ್ಯವಾಗಿ ಆ ಮೂಲಕ ಸಂಭಾಷಣೆಗೆ ಜೀವ ಬರುತ್ತದೆ ಇಂಥ ಅಭಿನಯವನ್ನು ಸಂಭಾಷಣೆಯಿಲ್ಲದೆ ಸಾಧಿಸಬಹುದು ಎಂಬುದಕ್ಕೆ ಜರ್ಮನಿ, ರಷ್ಯಾ ಮತ್ತು ಅಮೇರಿಕಗಳಲ್ಲಿ ಪ್ರಯೋಗಗಳನ್ನು ನಡೆಸಿರುತ್ತಾರೆ. ಇತ್ತೀಚೆಗೆ ಅಮೇರಿಕಾದಲ್ಲಿ Theatre of the deaf ಎಂಬ ಪ್ರಯೋಗಗಳು ಪ್ರಸಿದ್ಧವಾಗಿವೆ. ಇವುಗಳಲ್ಲಿ ಕಿವುಡ-ಮೂಗರೇ ಪಾತ್ರಧಾರಿಗಳು. ಆದುದರಿಂದ ಅವರು ಸಂಭಾಷಣೆಯನ್ನು ಮೂಕರ ಸಂಕೇತಗಳ ಆಧಾರದಿಂದ ರೂಪಿಸಿಕೊಂಡಿದ್ದಾರೆ. ಈ ಬಗೆಯ ಸನ್ನೆಗಳು ಮಾನವತೆಗೆಲ್ಲಾ ಸಾಮಾನ್ಯವಾಗುವ ಮಟ್ಟದಲ್ಲಿ ಬಳಕೆಯಾಗುವುದರಿಂದ ಅವೇ ಒಂದು ಭಾಷಾರೂಪವಾಗುತ್ತದೆ. ಅಂದರೆ ಅನುಭವವನ್ನೆಲ್ಲಾ ಭಾಷೆಯ ಮೂಲಕ ಸಂಗ್ರಹಿಸಲು ಸಾಧ್ಯವಾಯಿತು. ಇದರ ರೂಪವೇ ಇಂದಿಗೂ ಗದ್ಯವಾಗಿದೆ. ಇದರ ಮೂಲಕ ನಾಟಕದ ದೃಶ್ಯರೂಪವನ್ನು ಅದರ ಸೂಕ್ಷ್ಮಗಳನ್ನೆಲ್ಲಾ ವಿವರಿಸಲು ಸಾಧ್ಯವಾಗಿದೆ. ಇಂತಹ ವಿವರಣೆಯ

---

**ಶ್ರೀನಿವಾಸರಾಜುರವರ 'ಐದು ಮೂಕನಾಟಕಗಳು' ಕೃತಿಯ ಬಗ್ಗೆ ಕ. ವೆಂ. ರಾಜಗೋಪಾಲ್‌ರವರು ಬಹಳ ಹಿಂದೆಯೇ ಈ ಲೇಖನ ಕೊಟ್ಟಿದ್ದರು. ಆದರೆ ಶೂದ್ರದ ಪ್ರಕಟವಾದ ಲೇಖನಗಳ ಕಡತದಲ್ಲಿ ಸೇರಿಕೊಂಡಿದ್ದರಿಂದ ಪ್ರಕಟಿಸಲಾಗಲಿಲ್ಲ. ಮೂಕನಾಟಕಗಳ ಬಗ್ಗೆ ಇದು ಅರ್ಥಪೂರ್ಣ ಕೃತಿ ಅನ್ನಿಸಿದ್ದರಿಂದ ಈ ಲೇಖನವನ್ನು ಪ್ರಕಟಿಸುತ್ತಿದ್ದೇವೆ. ಪ್ರೊ. ಕ. ವೆಂ. ರಾಜಗೋಪಾಲ್‌ರವರು ಬೆಂಗಳೂರು ವಿಶ್ವವಿದ್ಯಾಲಯ ನೃತ್ಯ—ನಾಟಕ ಮತ್ತು ಸಂಗೀತ ವಿಭಾಗದ ಮುಖ್ಯಸ್ಥರಾಗಿದ್ದಾರೆ.**

**—ಸಂ.**

---

ಆಧಾರದಿಂದ ನಾಟಕಕಾರನ ಸಂಭಾಷಣಾರೂಪ ರಚನೆಗಳಿಗಿಂತ ಅಭಿನಯದ ಸ್ವರೂಪ ವನ್ನೇ ವಿವರಿಸಲು ಸಾಧ್ಯವಾಗಿದೆ—ಈ ವಿವರದಿಂದ ದೃಶ್ಯರೂಪವನ್ನು ಅಚ್ಚು ಕಟ್ಟಾಗಿ ಪ್ರದರ್ಶಿಸಲು ಅನುಕೂಲವಾಗಿದೆ. ಶ್ರೀನಿವಾಸರಾಜು ಅವರು ಮಾಡಿರುವ ಪ್ರಯತ್ನ ಇಂತಹದು.)

ಈಗ ಭಾಷೆಯ ನೆರವಿಲ್ಲದಿದ್ದರೆ ನಮ್ಮ ಕೆಲವು ಅಂದರೆ ಆಂತರಿಕ ಅನು ಭವಗಳನ್ನು ಪ್ರಕಟಿಸಲು ಸಾಧ್ಯವಿಲ್ಲವೆನ್ನಬಹುದು—ಇಲ್ಲಿ ನಮ್ಮ ಅಂತರಂಗವೆಂಬುದು ಸಾಮಾಜಿಕತೆಯಿಂದ ಪ್ರತ್ಯೇಕವೆಂಬಂತೆ ತೋರುವುದಾದರೂ ಪ್ರತಿಕ್ರಿಯಾತ್ಮಕ ವಾದುದು—ಎಂಬ ಸತ್ಯವನ್ನು ಮರೆಯಬಾರದು.

ಈ ಕೃತಿಗಳು ಮಾತಿಲ್ಲದ ಕಾರಣ ಮೂಕಸಂವೇದನೆಯಿಲ್ಲ. ನಮ್ಮ ಸಾಮೂ ಹಿಕ ಜೀವನದಲ್ಲಿ ಮಾಡುವ ಕಲ್ಪನೆಗಳೇ ಮಾತಿನ ನಾಟಕದಲ್ಲಿರುವಂತೆಯೇ ಒಡ ಮೂಡುತ್ತದೆ. ಅಂದರೆ ಜೀವನದ ವಾಸ್ತವ ಸ್ವರೂಪವನ್ನೇನೂ ಅವು ಮಾರುವು ದಿಲ್ಲ ಅಥವಾ ವಿಕಾರಗೊಳಿಸುವುದಿಲ್ಲ. ಅಲ್ಲದೆ ಒಂದು ನಾಟಕವು ಉದಾಹರಣೆಗೆ ತೆರೆಗಳು (ಪಿ. ಲಂಕೇಶ್) ಅರ್ಥವಿಸ್ತರಣೆಗೆ ಮತ್ತು ಅರ್ಥಾಂತರಗಳಿಗೆ ಅವಕಾಶಕೊಡು ವಂತೆಯೇ ಶ್ರೀನಿವಾಸರಾಜು ಅವರ ಮೂಕ ನಾಟಕಗಳು ಅವಕಾಶಕೊಡುತ್ತವೆ— ಈ ನಿಟ್ಟಿನಲ್ಲಿ ವಿಚಾರ ಮಾಡಿದಾಗ ಅವರ 'ಫೀನಿಕ್ಸ್' ಒಂದು ಒಳ್ಳೆಯ ಪ್ರಯತ್ನ.

ಅವರ 'ಬೀಗದಕೈ' ನಾಟಕದಲ್ಲಿ ಇಂದಿನ ಜೀವನಕ್ಕೆ ಬೀಗದಕೈ ಒಂದನ್ನು ಮೂಕನಾದ ಬಾಲಕನ ವರ್ತನೆಯಲ್ಲಿ ಬೆಳಕಿಗೊಡ್ಡುತ್ತಾರೆ. ಈ ಬಾಲಕ ನಾಯಕ ನಾಗಿ ದುಡಿಮೆಯನ್ನೇ ನಂಬಿ ಬದುಕಬೇಕಾದಾಗ ಬೇರೆಯವರ ಕರುಣೆಯ ಅವಶ್ಯ ಕತೆಯೆಷ್ಟೆಂಬುದನ್ನು ನಾವು ಪ್ರೇಕ್ಷಕರಾಗಿ ವಿಚಾರ ಮಾಡಬೇಕಾಗುತ್ತದೆ. ಇಲ್ಲಿ ಬಸವಣ್ಣನವರ 'ದಯೆಯೇ ಧರ್ಮದ ಮೂಲವಯ್ಯ'—ಎಂಬ ವಚನ ನೆನಪಾಗ ಬಹುದು. ಆದರೆ ಇವರ ರಚನೆಯಲ್ಲಿ ಆ ಹೇಳಿಕೆಯನ್ನ ದೃಶ್ಯರೂಪಕ್ಕೆ ತಂದಿದ್ದಾ ರೆನ್ನುವಂತಿಲ್ಲ. ಅದು ಕೇವಲ ಒಂದು ಹೊಳಪು ಮಾತ್ರ. ಇದು ಬಸವಣ್ಣನವರ ಧಾರ್ಮಿಕ ಹೇಳಿಕೆಯನ್ನೂ ದಾಟಿದ ಜೀವಂತಕ್ರಿಯೆಯಾಗುತ್ತದೆ.

ವಿಚಾರದ ಮಾತು ಬಂದಾಗ ನಮ್ಮ ಜೀವಂತ ಸಮಸ್ಯೆಗಳು ಕಾಣಿಸಿಕೊಳ್ಳು ತ್ತವೆ—ಅವುಗಳಿಗೆ ಪರಿಹಾರವೇನು ? ಎಂಬ ಪ್ರಶ್ನೆಯೂ ನಮ್ಮದೇ ಆಗಿದೆ. ನಾಟಕ ಕಾರನು ಇಂತಹ ಪ್ರಯತ್ನಗಳನ್ನು ಮಾಡಿರುವುದುಂಟು. ಶ್ರೀರಂಗರ 'ಹರಿಜನ್ವಾರ' ಮೊದಲಾಗಿ ಕೆಲವು ನಾಟಕಗಳನ್ನು ಇಲ್ಲಿ ಉದಾಹರಿಸಬಹುದು. ಶ್ರೀನಿವಾಸರಾಜು ಅಂತಹ ದೊಡ್ಡ ನಾಟಕಗಳನ್ನು ರಚಿಸಿಲ್ಲ ನಿಜ, ಆದರೆ ಅಂತಹ ಸಾಮಾಜಿಕವಾದ ಗುರುತರವಾದ ಸಮಸ್ಯೆಗಳನ್ನು ಗುರುತಿಸದೇ ಇಲ್ಲ. 'ಇವರ ಮನೆಯೊಳಗಣ ಕಿಚ್ಚು'

ಮತ್ತು 'ಏಳು ಮನುವಿನ ಮಗನೆ' ಎಂಬ ಎರಡು ನಾಟಕಗಳು 'ಹರಿಜನ್ವಾರ'ದ ಸಿಟ್ಟಿಗೆ ಸೇರಿ ಕೆಲಸಮಾಡುತ್ತವೆ.

(ಇಂತಹ ಅಸಾಧ್ಯವೆಂದು ಹೇಳಬಹುದಾಗಿದ್ದ ಸಾಧ್ಯತೆಯನ್ನು ಶ್ರೀನಿವಾಸರಾಜು ಹಿಡಿದಿರುವುದು ಗಮನಾರ್ಹ. ಇವುಗಳಲ್ಲಿ ಪ್ರೇಕ್ಷಕನು ಎಲ್ಲಿಯೂ ಯಾವ ಪಾತ್ರದಲ್ಲಿಯೂ ತನ್ನ ಐಕ್ಯತೆಯನ್ನು ಕಂಡುಕೊಳ್ಳಬೇಕಾದುದಿಲ್ಲ. ಆದರೆ ಇಂತಹ ಸಾಮಾಜಿಕ ಪರಿಸರವನ್ನು ಅರಿತುಕೊಂಡು ವಿಚಾರಮಾಡಬೇಕಾಗುತ್ತದೆ. ಇಲ್ಲಿಯ ಐದು ನಾಟಕಗಳಲ್ಲಿ ನಮ್ಮ ಸಾಮಾಜಿಕತೆಗೆ ನೇರವಾಗಿ ಅನ್ವಯಿಸುವ ಮೂರು ಬಗೆಗಳು ಸ್ಪಷ್ಟವಾಗಿವೆ—1. ನಮ್ಮ ಜೀವನದ ದಾರುಣ ಪರಿಸ್ಥಿತಿ. 2. ಮತ್ತೆ ಮತ್ತೆ ಜನ್ಮತಾಳುತ್ತಾ ಹೋಗುವ ಬದುಕಿನ ವಿಚಿತ್ರ ಸಾಮರ್ಥ್ಯ. 3. ನಮ್ಮ ವಾಸ್ತವತೆಯಲ್ಲಿರುವ ಸ್ಥಿತಿಗತಿಗೆ ಪರಿಹಾರ ಸೂಚನೆ,—ಒಂದಕ್ಕೆ 'ಬೀಗದಕ್ಕೈ', ಎರಡಕ್ಕೆ 'ಫೀನಿಕ್ಸ್' ಮೂರನೆಯದಕ್ಕೆ 'ಮನೆಯೊಳಗಣ ಕಿಚ್ಚು', 'ಏಳು ಮನುವಿನ ಮಗನೆ' ಮತ್ತು 'ಯೋಚಿಸಿ'................

ಇವೆಲ್ಲಕ್ಕೂ ಆಧಾರವಾಗಿರುವ 'ಮಾನವೀಯ ಧೋರಣೆ' ಗಮನಾರ್ಹ. ಇದರಿಂದಾಗಿ ನಾಟಕಕಾರರು ಎಲ್ಲಿಯೂ ವೈಯಕ್ತಿಕವಾದ ದ್ವೇಷಾಸೂಯೆಗಳ ಇತಿಮಿತಿಗೆ ಜಾರುವುದಿಲ್ಲ, 'ಏಳು ಮನುವಿನ ಮಗನೆ' ಮತ್ತು 'ಮನೆಯೊಳಗಣ ಕಿಚ್ಚು' ಇವುಗಳಲ್ಲಿ ಪರಿಹಾರದ ಸೂಚನೆಯಿರುವುದಾದರೂ ಸಂಕೇತದಲ್ಲಿ ರೂಪದಲ್ಲಿಯೇ ಹೊರತು ಸಂಕುಚಿತವಾದ ಅರ್ಥದಲ್ಲಿ ಅಲ್ಲ. ಅಥವಾ ನಾಟಕಕಾರನ ವೈಯಕ್ತಿಕತೆಯಿಂದ ಕೂಡಿರುವುದಿಲ್ಲ. ಇಲ್ಲಿ ಅವರು ಒಬ್ಬ Sociologistನ ರೀತಿಯಲ್ಲಿ ವರ್ಣಿಸಿದ್ದಾರೆನ್ನಬಹುದು.)

ಈ ಐದು ನಾಟಕಗಳಲ್ಲಿ ಯಾವುದೇ ಪಾಶ್ಚಾತ್ಯ ಅಥವಾ ಇತರ ನಾಟಕದ ಅನುಕರಣೆಯಿರುವುದಿಲ್ಲ. ನಾಟಕ ರಚನೆ ಮತ್ತು ಪಾತ್ರಪೋಷಣೆಯಲ್ಲಿ ಸಂಪೂರ್ಣವಾದ ಸ್ವಂತಿಕೆಯಿರುವುದು ಒಂದು ವಿಶೇಷ. ಅಂತೆಯೇ ಇವುಗಳ ಅನುಭವಗಳೂ ವಿಶಿಷ್ಟವಾಗುತ್ತವೆ. ಇತರ ಸಾಹಿತ್ಯಿಕ ನಾಟಕಗಳಂತೆ ನಿರ್ದೇಶಕನಾಗಲಿ ನಟನಾಗಲಿ ಕೃತಿಯ ಅರ್ಥವನ್ನು ಮಾರ್ಪಡಿಸಿಕೊಳ್ಳುವುದಕ್ಕೆ ಅವಕಾಶವಿಲ್ಲ. ಅಂತಹ ಸ್ಪಷ್ಟತೆಯು ಕಲ್ಪನೆಯಾಗಿರುವುದರಿಂದ ಇವುಗಳು ಕನ್ನಡಕ್ಕೆ ವಿಶೇಷ ಕೊಡುಗೆಯಾಗುತ್ತವೆ.

ಬೀಗದಕ್ಕೈ ಮೊದಲಾಗಿ ಐದೂ ಏಕಾಂಕಗಳು ಉದ್ದಿಶ್ಯಪೂರ್ವಕ ರಚನೆಗಳು: ಇವುಗಳಲ್ಲಿ ನಮ್ಮ ಸಮಕಾಲೀನ ಜೀವನದ ದಾರುಣತೆ, ವಕ್ರತೆ ಮತ್ತು ಸಮಸ್ಯಾತ್ಮಕ ಪರಿಸರ—ಇವುಗಳ ಪರಿಚಯವಾಗುತ್ತದೆ. ನಾಟಕಕಾರರು ಪ್ರತಿಯೊಂದು ಕೃತಿ

ಯಲ್ಲೂ ಸ್ಪಷ್ಟವಾಗಿ ಅದರದರ ವಸ್ತುವಿನ ಪೂರ್ಣತೆಯನ್ನು ಭಾವಗೀತೆಯ ಧಾಟಿಯಲ್ಲಿ ಪರಿಣಾಮಕಾರಿಯನ್ನಾಗಿ ಮಾಡಿರುತ್ತಾರೆ.

**ಬೀಗದಕೈ** : ಇದರ ನಾಯಕ ಒಬ್ಬ ಅಸಹಾಯಕ ಬಾಲಕ. ಅವನ ಬದುಕು ಪಂಜರದ ಮೈನಾ ಗತಿಯಾಗಿದೆ. ಬದುಕುವುದಕ್ಕೆ ತನ್ನ ಸುತ್ತು ಪ್ರಪಂಚದೊಡನೆ ವ್ಯವಹರಿಸಲು ಅವನಲ್ಲಿ ಒಂದು ಸಾಧನವಿದೆ—ಅದೇ ಬೀಗದಕೈ. ಅದಕ್ಕಾಗಿ ಅವನಿಗಿಂತ ಐಶ್ವರ್ಯವಂತವಾದ ಪ್ರಪಂಚವು ಅವನಲ್ಲಿಗೆ ಬರುತ್ತದೆ. ಕೆಲಸವಾದ ಕೂಡಲೆ ಸರಿದುಹೋಗುತ್ತದೆ—ಹೀಗೆ ಹುಡುಗನ ಪ್ರಪಂಚ ಮೈನಾಹಕ್ಕಿಯ ಗತಿಯೇ ಆಗಿದೆ. ಈ ಸಂಬಂಧಕ್ರಿಯೆಯ ಇಮ್ಮುಖತೆಯನ್ನು, ಒಂದು ಹಕ್ಕಿಯ ಬಗೆಯದಾ ವಂತೊಂದು ಸ್ವತಂತ್ರವಾಗಿ ವಿಶಾಲವಾಗಿರುವ ಪ್ರಪಂಚದ್ದು—ನಾಟಕಕಾರರು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಅದರಲ್ಲೂ ಒಮ್ಮೆ ಹುಡುಗನು ತನ್ನ ಬೀಗದಕೈ ಕಳೆದುಕೊಂಡು ಪರದಾಡಬೇಕಾದ ಸಂದರ್ಭವು ನಾಟಕದ ಅಂತರಂಗಕ್ರಿಯೆಯಾಗುತ್ತದೆ. ನಿರ್ದೇಶಕರು ಈ ವಿಚಾರವನ್ನು ಮರೆಯುವಂತಿಲ್ಲ.

ನಾಟಕಕಾರರು ಈ ಸಂದರ್ಭವನ್ನು ಇಡೀ ಭಾರತದ ವಾತಾವರಣಕ್ಕೆ ಅಳವಡಿಸಿದ್ದಾರೆ. ಇದರಿಂದ ಈ ಕೃತಿಯು ತನ್ನ ವ್ಯಾಪಕಾರ್ಥವನ್ನು ಸಮರ್ಥಿಸುತ್ತದೆ. ಅಸಹಾಯಕನಾದ ಹುಡುಗ ನಾಯಕನ ರೂಪಕಾಂಶವು ನಮ್ಮಲ್ಲೆಲ್ಲಾ ಇರುವುದು ಸಾಧ್ಯವಿದೆ—ಇದನ್ನು ಮಾತ್ರ ನಮ್ಮ ವಿಚಾರವಂತಿಕೆಯಿಂದ ಅರಿಯಬಹುದಾಗಿದೆ.

**ಫೀನಿಕ್ಸ್** : ನಾಟಕದಲ್ಲಿ ಮಾತಿನ ಅವಶ್ಯಕತೆಯಿಲ್ಲದೆ ಒಂದು show ಜರಗುತ್ತದೆ. ಅಲ್ಲಿಯೂ ಬದುಕುವುದಕ್ಕೆ ಇಬ್ಬರು ಹೂಡುವ ತಂತ್ರದ ಮುಖ್ಯ. ಈ ತಂತ್ರವೇ ವಾಸ್ತವತೆಯಿಂದ ಹಿಡಿದು ವ್ಯಂಗ್ಯ ಅಣಕಿನವರೆಗೆ ತನ್ನನ್ನು ಸಮರ್ಥಿಸಿಕೊಳ್ಳುತ್ತದೆ. ಇದರಲ್ಲಿ ಭಾಗವಹಿಸುವವರೆಲ್ಲಾ ಮಾತು ಬಲ್ಲವರು. ಆದುದರಿಂದ ಮಾತಿನಿಂದ ತುಂಬಿದ ಜಗತ್ತಿಗೆ ಸವಾಲು ಹಾಕಿದಂತೆ ಮಾತಿಲ್ಲದ ವಾತಾವರಣದಲ್ಲಿ ಎಂಥವರನ್ನೂ ಸೆರೆಹಿಡಿಯುತ್ತಾರೆ, ಇದರಿಂದಲೇ ಆಶ್ಚರ್ಯಕರವಾದ ಪರಿಣಾಮವಾಗುತ್ತದೆ.

ಇಂಥ ಒಳ ನಾಟಕಾಂಶದಲ್ಲಿ ಕಾವ್ಯಧ್ವನಿಯೊಂದು ಹುಟ್ಟುತ್ತದೆ. ನಮ್ಮೆಲ್ಲರ ಬದುಕು ಹೀಗೆ ಕೃತಕತೆಯ ಲ್ಲಿ ಸತ್ತಂತೆ ಆಗಿ ಅದರಿಂದ ಮತ್ತೆ ಜೀವಂತವಾಗುತ್ತದೆ, Each one of us die everyday and arise like the Phoenix ಎನ್ನುವ ಒಂದು ಅಸಾಧಾರಣ ತತ್ತ್ವವು ಇದರಲ್ಲಿ ಅಡಗಿರುವುದು ಆಶ್ಚರ್ಯವನ್ನು ದ್ವಿಗುಣಗೊಳಿಸುತ್ತದೆ.

ಈ ತಂತ್ರದಲ್ಲಿ ಕೃತಕ ಮತ್ತು ಮೋಸವೆಂಬ ಹೊದಿಕೆಯನ್ನು ಹೊದ್ದ ಈ ದೃಶ್ಯವು ಜೀವನದ ಪರಮ ಸತ್ಯವೊಂದನ್ನು ಧ್ವನಿಸುವಾಗ ವಿರೋಧಾಭಾಸವನ್ನು ಕಾಣುತ್ತೇವೆ; ಆದರೆ ಬದುಕಿನಲ್ಲಿ ಇದೂ ಸತ್ಯವೇ ಆಗಿದೆ.

ಇದರ ಎರಡೂ ಮುಖಗಳು ಗಮನಾರ್ಹ. ಸ್ವಂತ ಬದುಕಿಗಾಗಿ ಪ್ರಪಂಚವನ್ನು ಮೋಸಪಡಿಸುವುದರಲ್ಲಿ ಯಶಸ್ಸಿದೆ. ಒಬ್ಬ ಹೆಣ್ಣು ಮಗಳು, ಮಂತ್ರಿ, ಪಾದ್ರಿಗಳೂ ಇಲ್ಲಿ ಮೋಸಕ್ಕೆ ಗುರಿಯಾಗುತ್ತಾರೆ. ಅದರಲ್ಲೂ ಕೃತಕವಾದ ಸಾವನ್ನು ಅವರು ಗೌರವಿಸುತ್ತಾರೆ; ಪುರಸ್ಕರಿಸುತ್ತಾರೆ; ಪ್ರಾರ್ಥನೆ ಸಲ್ಲಿಸುತ್ತಾರೆ. ನಮ್ಮ ಬದುಕು ಹೀಗೆ ಸತ್ತು ಬಿದ್ದಿದೆ—ಎಂದು ಅಂದುಕೊಂಡಾಗಲೂ ನಾವೆಲ್ಲಾ ನಿಸ್ಸಹಾಯಕರಾಗಿ ದೇವರಿಗೆ ಶರಣಾಗುತ್ತೇವೆ; ಶಾಂತಿಯನ್ನು ಬಯಸುತ್ತೇವೆ. ಆದುದರಿಂದ ಕೃತಕವಾದ ಸಾವು ಜೀವಂತವಾದ ಪರಿಣಾಮವನ್ನುಂಟುಮಾಡುತ್ತದೆ. ಹಾಗೂ ಜೀವಂತವಾಗುತ್ತದೆ ಅಥವಾ ಸಾವನ್ನು ಬದುಕು ಗೆಲ್ಲುತ್ತದೆ.

ಜೀವನದ ಈ ಪರಮಾರ್ಥವೊಂದು ಇಲ್ಲಿ ಹಿಡಿಯಲ್ಪಟ್ಟಿದೆ. ಇದಕ್ಕಾಗಿ ನಾಟಕಕಾರರು ಬಳಸಿರುವ ತಂತ್ರವು 'ಬೀಗದಕೈ' ತಂತ್ರವನ್ನೇ ನೆನಪಿಗೆ ತರುತ್ತದೆ ಆದರೆ ಪರಿಣಾಮವು ಮತ್ತಷ್ಟು ಸಂಕೀರ್ಣವಾಗಿ ಆಶ್ಚರ್ಯಕರವಾಗುತ್ತದೆ.

ಯೋಚಿಸಿ ? : ಇದು ಈ ಸಂಗ್ರಹದ ಕೊನೆಯಲ್ಲಿದೆ. 'ಬೀಗದಕೈ' ನಮ್ಮೆಲ್ಲರ ಕ್ರೌರ್ಯವನ್ನು ಸೂಕ್ಷ್ಮವಾಗಿ ಮಾರ್ಮಿಕವಾಗಿ ಮಾಡಿಕೊಟ್ಟಿದೆ, ಈ ಕ್ರೌರ್ಯದ ಪರಿಸರದಲ್ಲಿ ಬದುಕು ಮೋಸದ ಉಡಿಗೆಯಲ್ಲಿ ಜೀವಂತವಾಗುವುದನ್ನು 'ಫೀನಿಕ್ಸ್' ತೋರಿಸುತ್ತದೆ. (ಈ ನಾಟಕದಲ್ಲಿ ಮೋಸವು ಜೀವಂತವಾಗಿ ಯಶಸ್ವಿಯಾಗುವುದನ್ನು ಮರೆಯುವಂತಿಲ್ಲ.)

ಯೋಚಿಸಿ—ಅನ್ನುವಾಗಲೂ ನಾಟಕಕಾರರು ನಮ್ಮ ಕ್ರೌರ್ಯದ ಸಾಮಾಜಿಕ ಸ್ವರೂಪವನ್ನು ಸ್ಪಷ್ಟವಾಗಿ ಬಿಡಿಸುತ್ತಾರೆ. ಈ ನಾಟಕವು ಪಾರ್ಕಿನಲ್ಲಿ ನಡೆಯುತ್ತದೆ. ಮಾಂದುಕನೊಬ್ಬನು ತನ್ನ ಬದುಕಿನುದ್ದದ ಕನಸು ಕಾಣುತ್ತಾನೆ ಕನಸಿನಲ್ಲಿಯೇ ಪರಿಹಾರವನ್ನು ಕಾಣುತ್ತಾನೆ. ಕ್ರೌರ್ಯಕ್ಕೆ ಕ್ರೌರ್ಯವೇ ಪರಿಹಾರವೆನ್ನುವಂತೆ ಆಗುತ್ತದೆ. ಈ ವಿಚಾರವೇ ನಮ್ಮನ್ನು ಕೆಣಕುವ, ಯೋಚಿಸುವಂತೆ ಮಾಡುವುದಾಗಿದೆ.

ಮನೆಯೊಳಗಣ ಕಿಚ್ಚು :— ನಾಟಕದಲ್ಲಿ 'ಮಾತನಾಡಬಾರದು' ಎಂಬ ಫಲಕವು ಮಾತನ್ನು ನಿವಾರಿಸುತ್ತದೆ. ಇದರಲ್ಲಿ ಒಬ್ಬ ಸ್ವಾಮಿಜಿಯು ದೇಶಕ್ಕೆ ಹಾಗೆಯೇ ನಮಗೆ ಮಾಡುವ ಮೋಸದ ಪರಿಚಯವಾಗುತ್ತದೆ ಅಂದರೆ ಪ್ರೇಕ್ಷಕರನ್ನು ಜಾಗೃತಿಗೊಳಿಸುತ್ತದೆ.

ಇಲ್ಲಿ ಮೂವರೂ ಕೂಡಿ ಮೋಸದ ಕ್ರಿಯೇಯಲ್ಲಿ ತೊಡಗಿದಾಗ ಆತ್ಮರಕ್ಷಣೆಗೆ ಅವರು ಕ್ರೌರ್ಯವನ್ನೇ ಲೀಲಾಜಾಲವಾಗಿ ಬಳಸುತ್ತಾರೆ. ಪ್ರೇಕ್ಷಕರಲ್ಲಿ ಒಬ್ಬರೆನ್ನ ಬಹುದಾದ ಒಬ್ಬ ಯುವಕ ಇಲ್ಲಿ ಕ್ರೌರ್ಯಕ್ಕೆ ಗುರಿಯಾಗುತ್ತಾನೆ. ಈತನೇ ನಾಟಕದ ಜೀವಾಳ ಮತ್ತು ಸಂವೇದಕ ಶಕ್ತಿ. ಇವನ ಚರ್ಯೆಗಳೇ ನಾಟಕವನ್ನು ಮುಗಿತಾಯದ ಕಡೆಗೆ ಒಯ್ಯುತ್ತವೆ.

ಸ್ವಾಮಿಜಿಯ ಬಲವನ್ನು ಮತ್ತು ಕ್ರೌರ್ಯದ ಸಾಧನಗಳಲ್ಲಿಯೇ ಕಾಣುತ್ತೇವೆ. ಮುಂದ್ರಿಸಿದ ಒಬ್ಬ ವ್ಯಕ್ತಿಯನ್ನೇ ಸಾಯಿಸುವ ಸಂದರ್ಭವು ಭಯಾನಕವಾದುದು. ಪ್ರೇಕ್ಷಕರನ್ನು ಕೆರಳಿಸಲೂಬಹುದು. ಒಂದೆರಡು ನಿಮಿಷಗಳಲ್ಲಿ ವಾತಾವರಣ ಬದಲಾಗುತ್ತದೆ—ಹೊರಗಿನಿಂದ ಸಮವಸ್ತ್ರಧಾರಿಯವರ ಧಾಟಿ ಬರುತ್ತದೆ. ಅಷ್ಟರಲ್ಲಿ ಸ್ವಾಮಿಜಿ ತನ್ನವನ ಬಂದುಕನ್ನು ಆಶ್ರಯಿಸುತ್ತಾನೆ. ಅವರೆಲ್ಲಾ ಹೆದರುತ್ತಾರೆ. ಆದರೆ ಯುವಕ ಗುಟ್ಟನ್ನು ತಿಳಿದವನು ಸ್ವಾಮಿಜಿಗೆ ಬಂದೂಕಿನ ದೌರ್ಬಲ್ಯವನ್ನು ತೋರಿಸುತ್ತಾನೆ. 'ಮಾತನಾಡಬೇಡಿ' ಫಲಕವನ್ನು ತೋರಿಸುತ್ತಾನೆ. ಈ ವೇರೆಗೆ ಪ್ರೇಕ್ಷಕರಿಗೆ ಒದಗಿದ್ದ Tension ನಗೆಯಾಗಿ ಹೊರಡುತ್ತದೆ, 'ಮಾತನಾಡಬೇಡಿ' ಫಲಕವನ್ನು ಕಿತ್ತುಹಾಕಿದಾಗ ನಾಟಕ ಮುಗಿಯುತ್ತದೆ.

ಇಲ್ಲಿಯ 'ಮಾತನಾಡಬೇಡಿ' ಎಂಬುದು Talk less and Work more ಎಂಬ ಎಮರ್ಜನ್ಸಿಯ ಹೇಳಿಕೆಯನ್ನು ನೆನಪಿಗೆ ತರಬಹುದಾಗಿದೆ. ಎಂತಹ ವಿಪರ್ಯಾಸ ಇಲ್ಲಿ ಅಡಗಿದೆ ?—

ಈ ನಾಟಕವು ಸಮಸ್ಯೆಯ ಪರಿಹಾರಕ್ಕೆ ಯುವಕರ ಜಾಗೃತಿಯನ್ನು ಸೂಚಿಸುತ್ತದೆ. ಕ್ರೌರ್ಯವನ್ನು ದುರ್ಬಲಗೊಳಿಸುವುದೊಂದೇ ಮಾರ್ಗವೆಂದು ಹೇಳುವಂತಿದೆ.

ಇಲ್ಲಿಯ ಮೋಸದ ವಾತಾವರಣವು ನೆಲಮಾಳಿಗೆಯ ದೃಶ್ಯವಾಗಿದೆ ನಮ್ಮ ಸಮಕಾಲೀನತೆಯಲ್ಲಿ ಇಂತಹ ವಸ್ತುವನ್ನು ಕುರಿತ ದೊಡ್ಡ ನಾಟಕವೂ ಇಲ್ಲದಿಲ್ಲ. ಆದರೆ ಅದು ಮನರಂಜನೆಯ ಆಧಾರದ ಮೇಲೆ ರಚಿತವಾದುದು. ಇದರಂತೆ ನೇರವಾದ ವಿಚಾರಪರವಾದ ತಂತ್ರವಾಗುವುದಿಲ್ಲ, ಅಲ್ಲದೆ ಅದರ ಕ್ರೌರ್ಯವೂ ಮೃದುವಾಗಿ ಆನಂದದಾಯಕವಾಗಿಬಿಡುತ್ತದೆ.

ಈ ನಾಟಕಕಾರರು ಒಂದು Shadow playಯ ಆಧಾರದಿಂದ, ಸ್ವಾಮಿಜಿಯ ಕಂಪನಿಯನ್ನು ನಾಶಮಾಡುವುದನ್ನು ತೋರಿಸುತ್ತಾರೆ.

●



# ಕವಿಗೊಂದು ಕಣ್ಣು

**ಮಕ್ಕಳ ಮನಸ್ಸು :**

ಒಂದು ವಾರದ ಹಿಂದೆ ನನ್ನ ಗೆಳೆಯನ ರೂಮಿನಲ್ಲಿ ಕೂತಿದ್ದೆ. ಅವನು ಬರುವುದು ತಡವಾದ್ದರಿಂದ ದಾಸ್ತೋವಸ್ಕಿಯ 'ಬಡಜನತೆ' (poor people) ಎಂಬ ಕಾದಂಬರಿಯ ಪುಟಗಳ ತಿರುವತೊಡಗಿದ್ದೆ. (ಎಂದೋ ಓದಿದ್ದ ಕಾದಂಬರಿ,) ಸ್ವಲ್ಪ ಸಮಯದ ನಂತರ ನಾಲ್ಕೈದು ಮಕ್ಕಳು ಬಾಗಿಲ ಬಳಿ ಕೂತು ಆಡಲು ತೊಡಗಿದರು ಕೊಠಡಿ ಇದ್ದದ್ದು ಮೊದಲನೆಯ ಅಂತಸ್ತಿನಲ್ಲಾದ್ದರಿಂದ ಸಾಕಷ್ಟು ಗಲಾಟೆಯಿಲ್ಲದಿದ್ದರೂ; ಪಕ್ಕದ ಮನೆಯ ಮಕ್ಕಳು ಆಟವಾಡಲು ಬಂದಾಗ ಗಲಾಟೆಯಾಗುತ್ತಿತ್ತು. ದಾಸ್ತೋವಸ್ಕಿ ವರೆಂಕಳ ಬಗ್ಗೆ ಬರೆದ ಮಾತುಗಳು ಮನಸ್ಸಿನ ಚಿತ್ರ ಪಲಕದ ಮೇಲೆ ಗುಂಯ್‌ಗುಡ ತೊಡಗಿತ್ತು. "your little heart will be sad and cold. Grief will drain it of blood, sadness will break it you will die there alone and they will bury you in the cold earth with no one to weep over the grave" ದಾಸ್ತೋವಸ್ಕಿಯ ಈ ಮಾತುಗಳಲ್ಲೇ ಮಗ್ನನಾಗಿದ್ದೆ. ಆಗ ಆಟವಾಡುತ್ತಿದ್ದ ಹುಡುಗಿಯೊಬ್ಬಳು "ನಿನಗೆ ಅಮಿತಾಬ್‌ಬಚ್ಚನ್ ಬೇಕೆ ? ರಾಜ್‌ಕುಮಾರ್ ಬೇಕೇ ? ಎಂದು ಕೇಳುತ್ತಿದ್ದಳು. ಇದರಿಂದ ಅವರು ಮದುವೆಯಾಟವಾಡುತ್ತಿದ್ದಾರೆ ಅನ್ನಿಸಿತು. ಆ ಮಕ್ಕಳೆಲ್ಲ ಐದು ವರ್ಷಕ್ಕಿಂತ ಪುಟ್ಟವರು. ನಾನು ಎದ್ದು ಕಿಟಕಿಯಲ್ಲಿ ನೋಡ ತೊಡಗಿದೆ. ನಾಲ್ಕು ಇಟ್ಟಿಗೆಗಳನ್ನು ತಂದು ಮನೆಕಟ್ಟಿದ್ದರು. ಒಂದಷ್ಟು ಹೂವು ಇದ್ದವು. ಇನ್ನೊಂದು ಕಾಗದದಲ್ಲಿ ಪುರಿ ಇತ್ತು. ಮತ್ತೆ ಹಾಸಿಗೆಯಲ್ಲಿ ಬಿದ್ದುಕೊಂಡೆ. ಮತ್ತೆ ಅದೇ ರಾಜ್‌ಕುಮಾರ್ ಮತ್ತು ಅಮಿತಾ

ಬಚ್ಚನ್ ಆ ಪುಟ್ಟ ಮಕ್ಕಳ ಬಾಯಲ್ಲಿ ನಲಿದಾಡುತ್ತಿದ್ದರು. ಅವುಗಳಲ್ಲಿ 'ಶಿಲ್ಪ' ಎಂಬ ಮಗು "ನನಗೆ ಅಮಿತಾಬ್ ಬೇಕು" ಎಂದು ತೊದಲುತ್ತ ಹೇಳುತ್ತಿದ್ದಳು.

ನಾವು ಎಷ್ಟೇ ನಮ್ಮ ಸಂಸ್ಕೃತಿ ಮತ್ತು ಪ್ರಜ್ಞೆಯ ಬಗ್ಗೆ ಹೇಳಿದರೂ "ಜನ ಪ್ರಿಯ ಸಂಸ್ಕೃತಿ" ಒಂದು ಸಮಾಜವನ್ನು ಹೇಗೆ ಅಸಹ್ಯವಾಗಿರಿಸುತ್ತೆ ಎಂಬುದನ್ನು ಯೋಚಿಸುವುದಿಲ್ಲ. ಅದರಲ್ಲೂ ಚಲನಚಿತ್ರಗಳು ಪ್ರಸಾರಮಾಡುವ ಅಸಹ್ಯೀಕರಣದ ಬಗ್ಗೆಯೂ ಪ್ರತಿಭಟನೆಯಿರುವುದಿಲ್ಲ. ಮಕ್ಕಳ ಅಥವಾ ಹಿರಿಯರ ಮನಸ್ಸನ್ನು ಪ್ರಬುದ್ಧಗೊಳಿಸುವ ಕಾರ್ಯಕ್ರಮಗಳನ್ನೇ ನಾವು ಮಾಡಿಸಿಕೊಳ್ಳಲು ಪ್ರಯತ್ನಿಸುತ್ತಿಲ್ಲ.

ಆಕಸ್ಮಿಕವಾಗಿ ಟಿ.ವಿ.ಯಲ್ಲಿ "ಮಕ್ಕಳ ಸೈನ್ಯ" ಚಿತ್ರ ನೋಡಿದೆ. ಆ ಮಕ್ಕಳು ಸೇವೆಯ ನೆಪದಲ್ಲಿ ಮಾಡುವ ಕೆಲಸ ಚಾಕು-ಚೂರಿ-ಬ್ಲೇಡು ಮತ್ತು ಕಲ್ಲು ತೂರಾಟ. ಈ ಮಕ್ಕಳಿಂದ ನಮ್ಮ ಮೂರ್ಖ ನಿರ್ದೇಶಕರು ತುಂಬ ಪ್ರಬುದ್ಧರಂತೆ ಮಾತಾಡಿಸುತ್ತಾರೆ. ಉದ್ದೇಶವಿಲ್ಲದ ನಮ್ಮ ಸರ್ಕಾರದವರು ಇಂಥದಕ್ಕೆ ಮನರಂಜನೆ ಶುಲ್ಕವನ್ನು ಮನ್ನಾ ಮಾಡುತ್ತಾರೆ.

ಯಾವುದೇ ಸಮಾಜದಲ್ಲಿ ಆದರ್ಶಗಳನ್ನು ಬಿತ್ತುವಾಗ ಸರ್ಕಾರಕ್ಕೆ ಮೊದಲು ಒಂದು ಆದರ್ಶದ ಕಲ್ಪನೆ ಇರಬೇಕಾಗುತ್ತೆ. ಇಲ್ಲದಿದ್ದರೆ ತಾವು ಮಾಡಿದ್ದೆಲ್ಲ ಆದರ್ಶವೇ ಎಂಬ ವಿಪರ್ಯಾಸದಲ್ಲಿರುತ್ತಾರೆ. ಉದಾಹರಣೆಗೆ ದೆಹಲಿಯ ದೂರ ದರ್ಶನದಿಂದ ಚೀನಾದ ಒಂದು ಚಿತ್ರವನ್ನು ಜುಲೈ ತಿಂಗಳಲ್ಲಿ ತೋರಿಸಿದರು. ಚಿತ್ರದ ಹೆಸರು 'ಅರಳುವ ಹೂಗಳು'. ಚಿತ್ರದ ಒಟ್ಟು ಕಥೆ: ಮಕ್ಕಳನ್ನು ಹೇಗೆ ಬೆಳೆಸಬೇಕೆನ್ನುವುದು. ಚಿತ್ರ ಹೊರಡುವುದು ಶಿಕ್ಷಕಿಯ ಮೂಲಕ. ಮಕ್ಕಳನ್ನು ಬೆಳೆಸುವ ಕ್ರಮದತ್ತ ಆಕೆಯ ಪಾತ್ರ ಅಪೂರ್ವವಾದದ್ದು. ಇಲ್ಲಿ ಪುಟ್ಟ ಮಕ್ಕಳದೇ ಪ್ರಾಬಲ್ಯ. ಇಂಥ ಪುಟ್ಟ ಮಕ್ಕಳಲ್ಲಿ ತಾಯಿಯಿಲ್ಲದ ಮಗುವೊಂದು ಇರುತ್ತೆ. ಅಪ್ಪ ಎರಡನೆಯ ಮದುವೆಯಾಗಿ ಮಗಳನ್ನು ಮರೆಯುತ್ತಾನೆ. ಅಂದರೆ ಸಣ್ಣಪುಟ್ಟದ್ದಕ್ಕೆಲ್ಲ ಹಿಂಸೆ ಕೊಡಲು ಹೋಗುವನು. ಈ ಮಗು ತುಂಬ ಹಿಂಸೆಯಾದಾಗಲೆಲ್ಲ ತನ್ನ ತಾಯಿಯ ಸಮಾಧಿಯ ಬಳಿ ಹೋಗಿ ಹೂವೊಂದನ್ನು ಇಟ್ಟು ದುಃಖಿಸುವಳು. ಈ ಮಗುವಿನ ಚಲನವಲನವನ್ನು ಗಮನಿಸಿದ ಶಿಕ್ಷಕಿ ಒಮ್ಮೆ ಅವಳನ್ನು ಹಿಂಬಾಲಿಸುವಳು. ಆಗ ಆ ಮಗು ಆ ಸಮಾಧಿಯ ಬಳಿ ಹೂವನ್ನಿಟ್ಟು ದುಃಖಿಸುತ್ತಿದ್ದುದನ್ನು ಕಾಣುವಳು. ಅದು ಅವಳ ತಾಯಿಯ ಸಮಾಧಿ ಎಂದು ತಿಳಿದು ಶಿಕ್ಷಕಿಗೆ ದುಃಖ ಉಕ್ಕಿಬರುತ್ತೆ (ಅವಳ ಬದುಕು ಒಂದು ರೀತಿಯಲ್ಲಿ ಇದೇ ರೀತಿಯದಾಗಿರುತ್ತೆ) ಇದರ ನಂತರ ದಿನೇ ದಿನೇ ಆ ಮಗುವಿಗೆ ಹತ್ತಿರವಾಗುತ್ತಾಳೆ. ಅವಳ ತಂದೆಗೆ ಅವನ ಹಿಂಸೆಯ ಬಗ್ಗೆ ಎಚ್ಚರಿಕೆ

ನೀಡುತ್ತಾಳೆ. ಆ ತಂದೆಗೆ ಪ್ರಜ್ಞೆಯನ್ನು ಕೆದಕಿದಂತಾಗುತ್ತೆ. ಆ ತಂದೆ ಒಂದು ರಾತ್ರಿ ಮಗಳು ಮಲಗಿದ್ದಲ್ಲಿಗೆ ಬರುವನು. ವ್ಯಥೆ ಬಾಧಿಸುವುದು. ಮಗುವಿನ ಪಕ್ಕದಲ್ಲಿ ಪುಟ್ಟ ಪೆಟ್ಟಿಗೆ ಇರುತ್ತೆ. ಅದನ್ನು ತೆರೆದು ನೋಡುವನು. ಅದರಲ್ಲಿ ತನ್ನ ಮೊದಲನೆಯ ಹೆಂಡತಿಯ ಭಾವಚಿತ್ರವಿರುತ್ತೆ. ಅದರ ಮೇಲೊಂದು ಗುಲಾಬಿಯಿರುತ್ತೆ. ಅವನಿಗೆ ದುಃಖವನ್ನು ಸಹಿಸಿಕೊಳ್ಳಲಾರದೆ ಬಿಕ್ಕಳಿಸುವನು. ಹೀಗೆ ನಾನಾ ಘಟನೆಗಳ ಮೂಲಕ ಸಾಗುವ ಚಿತ್ರವನ್ನು ನೋಡುತ್ತ ಹೋದಂತೆಲ್ಲ ಭೂತ ಕಾಲದಲ್ಲಿ ಸುತ್ತಾಡಿದಂತೆ ಭಾಸವಾಗುತ್ತಿತ್ತು. ನನ್ನ ಮಕ್ಕಳಂತೂ ಬಿಕ್ಕಿ ಬಿಕ್ಕಿ ಅಳುತ್ತಿದ್ದರು.

ಸುಮಾರು ಒಂದು ದಶಕದಿಂದೆ 'ಮುಂಪೆ' ಎನ್ನುವ ಫ್ರೆಂಚ್ ಚಿತ್ರವನ್ನು ನೋಡಿದೆ. ಅಲ್ಲಿಯ ಹುಡುಗಿಯೊಬ್ಬಳು ಮನೆಯಲ್ಲಿ ಪ್ರೀತಿ-ಪ್ರೇಮವನ್ನು ಕಳೆದುಕೊಂಡವಳು. ಬಡತನ ಬೇರೆ. ಈ ಬಡತನದ ನೋವನ್ನು ಮರೆಮಾಚಲು ತಂದೆ-ತಾಯಿಗಳು. ಅವಳನ್ನು ಎಂದೂ ಮುಂದ್ದಾಡಿರುವುದಿಲ್ಲ. ಇದರಿಂದ ಹೆಚ್ಚು ಹೆಚ್ಚು ಏಕಾಂಗಿಯಾಗುತ್ತ ಹೋದ ಆ ಹುಡುಗಿ ಮಾನಸಿಕ ಹಿಂಸೆಯಲ್ಲಿ ತೊಡಗುವಳು. ಒಮ್ಮೆಯಂತೂ ತನ್ನ ಸಹಪಾಠಿಗಳು ಅಚ್ಚುಕಟ್ಟಾಗಿ ಬಟ್ಟೆ ಹಾಕಿಕೊಂಡು ಆಟವಾಡುತ್ತಿದ್ದರೆ, ಅವಳಿಗೆ ಸಹಿಸಲಾಗುವುದಿಲ್ಲ. ಪಕ್ಕದಲ್ಲಿದ್ದ ಕೆಸರನ್ನು ಅವರ ಮೇಲೆ ಎಸೆಯುವಳು. ಈ ರೀತಿಯ ಘಟನೆಗಳ ಮೂಲಕ ಸಾಗುವ ಚಿತ್ರ; ಅವಳ ದುರಂತಕ್ಕೆ ಸಂಬಂಧಿಸಿದಂತೆ ನಾನಾ ವಿಷಯಗಳನ್ನು ಹೇಳುತ್ತ ಹೋಗುತ್ತದೆ.

ಕಳೆದ ಶನಿವಾರ 131 ನಂಬರಿನ ಬಿಟಿಎಸ್ ಬಸ್ಸನ್ನು ಚೆಕ್‌ಪಾಯಿಂಟ್‌ಸಲ್ಲಿ ಹತ್ತಿದೆ. ಅದು ಎಕ್ಸ್‌ಪ್ರೆಸ್ ಆಗಿತ್ತು. ಇಬ್ಬರು ಹುಡುಗರು ಪುಟ್ ಬೋರ್ಡಿನ ಮೇಲೆ ನಿಂತು ಬಾಯಿಗೆ ಬಂದದ್ದೆಲ್ಲ ಮಾತಾಡುತ್ತಿದ್ದರು. ಬಸ್ಸು ಇನ್ನು ಚಲಿಸಿರಲಿಲ್ಲ. ಕಂಡೆಕ್ಟರ್ ಚೀಟಿ ಕೊಡುತ್ತಿದ್ದ. ಆಗ ರಸ್ತೆಯ ಮಗ್ಗುಲಲ್ಲಿ ಹೊಸದಾಗಿ ಮದುವೆಯಾಗಿದ್ದ ದಂಪತಿಗಳು ಒಬ್ಬರಕೈಯನ್ನೊಬ್ಬರು ಹಿಡಿದು ಹೋಗುತ್ತಿದ್ದರು. ಅವರನ್ನು ನೋಡಿ ಈ ಹುಡುಗರು "ಏಯ್ ಕೈ ತೆಗೀರಿ" ಎಂದು ನಗತೊಡಗಿದರು. ಅವರು ಇವರತ್ತ ತಲೆಯೆತ್ತಿ ನೋಡಿ ಸುಮ್ಮನೆ ಸಾಗಿದರು. ನನಗೆ ನಿಜವಾಗಿಯೂ ಹಿಂಸೆಯಾಯಿತು. "ಹೋಗಲಿ ಬಿಡ್ರಯ್ಯ, ಅವರ ಪಾಡಿಗೆ ಅವರು ಸಂತೋಷವಾಗಿ ಹೋಗ್ತಿದ್ದಾರೆ" ಎಂದೆ. ಅದಕ್ಕೆ ಅವರು ಸಿಟ್ಟಿನಿಂದ "ಸಾಕ್ ಸುಮ್ನಿರಯ್ಯ ಮಹಾಗಾಂಧಿ ಪಕ್ಕದಲ್ಲಿ ಹುಟ್ಟಿದವನ ಹಾಗೆ ಮಾತಾಡಬೇಡ" ಎಂದರು. ಸುಮಾರು ಇಪ್ಪತ್ತೊಂದು ವರ್ಷದ ಯುವಕರಾದ ಅವರ ಮಾತುಗಳನ್ನು ಕೇಳಿ ಒಂದು ಕ್ಷಣ ಗಾಬರಿಗೊಂಡೆ. ನನ್ನೊಡನೆ ನಿಂತಿದ್ದವರು ಯಾರೂ ಅವರನ್ನು ಪ್ರತಿಭಟಿಸಲು ಹೋಗಲಿಲ್ಲ.

ಕೊನೆಗೆ ಕಂಡಕ್ಟರ್ ಕೆಳಕ್ಕಿಳಿದು ಟಿಕೆಟ್ ಕೊಡಲು ಹೋದಾಗ ; "ಈ ಬಸ್ಸಿನಲ್ಲಿ ಟಿಕೆಟ್ ಎಷ್ಟು ?" ಎಂದು ಕೇಳಿದರು. ಅವನು ಹೇಳಿದ. "ಅಷ್ಟು ಯಾಕಯ್ಯ ಕೊಡಬೇಕು" ಎಂದು ಅಲ್ಲಿಯೇ ನಿಂತರು. ಬಸ್ಸು ಚಲಿಸಿದಾಗ ತಟಕ್ಕನೆ ಹತ್ತಿಕೊಂಡು ಬಾಯಿಗೆ ಬಂದಂತೆಲ್ಲ ಮಾತಾಡತೊಡಗಿದರು.

ಇದು ದಿನನಿತ್ಯ ನಡೆಯುವ ಘಟನೆಗಳಾದರೂ ಇದರ ಹಿಂದಿರುವ ಮನಸ್ಸನ್ನು ಯಾವ ರೀತಿಯಲ್ಲಿ ತಿದ್ದಬೇಕು ? ಹೇಗೆ ತಿದ್ದಬೇಕು ? ಎಂಬುದು ಪ್ರಶ್ನೆಯಾದರೂ ಉತ್ತರಕ್ಕಾಗಿ ನಾವ್ಯಾರು ಗಂಭೀರವಾಗಿಲ್ಲ ಅನ್ನಿಸುತ್ತೆ ಅನೇಕ ಬಾರಿ ಇದಕ್ಕೆಲ್ಲ ನಮ್ಮ ಸುತ್ತಮುತ್ತಲಿನ ಭ್ರಷ್ಟಾಚಾರ ಹಾಗೂ ನಮ್ಮ ಚಲನ ಚಿತ್ರಗಳು ರವಾನಿಸುವ ನೈತಿಕ ಮೌಲ್ಯಗಳು ನಿಜವಾಗಿಯೂ ಕಾರಣ ಅನಿಸುತ್ತೆ. ಮತ್ತೊಂದು ಮುಖ್ಯ ವಿಷಯ ವನ್ನು ಇಲ್ಲಿ ಖಾಸಗಿಯಾಗಿ ಪ್ರಸ್ತಾಪಿಸಬಹುದೇನೋ ಅನಿಸುತ್ತೆ, ಯಾಕೆಂದರೆ ಒಬ್ಬ ಭ್ರಷ್ಟನಾದ ವ್ಯಕ್ತಿ ತನ್ನ ಮಕ್ಕಳ ಮೇಲೆ ಯಾವ ರೀತಿಯ ನಿಯಂತ್ರಣವನ್ನು ಹೊಂದಿರ ಬಲ್ಲ ಎಂಬುದು. ನನ್ನ ವಿದ್ಯಾರ್ಥಿಯೊಬ್ಬ ರವಿನಲ್ಲ್ಯ ಅಧಿಕಾರಿಯ ಮಗ. ಎಂದೂ ಅಪ್ಪನ ಬಗ್ಗೆ ಗೌರವವಿಲ್ಲ. ಆ ಪುಟ್ಟ ಹುಡುಗ ಒಂದು ರೀತಿಯ ಏಕಾಂಗಿತನದಿಂದ ನರಳುತ್ತಿರುತ್ತಾನೆ. ಈ ದೃಷ್ಟಿಯಿಂದ ಚೀನಿ ಶಿಕ್ಷಕಿ ಎಂದೂ ಹಿಂಸೆಯನ್ನು ಸಹಿಸದ, ಆಕೆ ಮಕ್ಕಳನ್ನು ರೂಪಿಸುವ ಕ್ರಮವೇ ಆತ್ಮೀಯವಾದದ್ದು. ನಮ್ಮ ಭಾರತದ ಬಹು ಪಾಲು ಮೇಷ್ಟ್ರುಗಳು ಈ ಚಿತ್ರವನ್ನು ನೋಡಬೇಕಿತ್ತು. ಯಾಕೆಂದರೆ ನಮ್ಮ ಮೇಸ್ಟ್ರುಗಳಿಗೆ ತರಗತಿಗೆ ಹೋಗುವಾಗ ಕೈಯಲ್ಲಿ ಲಾಟಿಯಿಲ್ಲದಿದ್ದರೆ, ನಾಲಿಗೆಗೆ ಶಕ್ತಿಯೇ ಬರುವುದಿಲ್ಲ. ಈ ಲಾಟಿ ಹೇಗೆ ಮಕ್ಕಳನ್ನು ತಮ್ಮಿಂದ ದೂರ ಮಾಡುತ್ತ ಹೋಗುತ್ತದೆ ವೆಂಬುದನ್ನು ನಾವು ಅರಿಯಬೇಕಾಗುತ್ತೆ.

ನಾವು ಕಲಿಸುವ ಮಕ್ಕಳ ಮಾನಸಿಕ ಸ್ವರೂಪದ ಬಗ್ಗೆ ಯೋಚಿಸುತ್ತ ಹೊರಗೆ ಬಂದಾಗ, ಮದುವೆಯಾಟವಾಡುತ್ತ ಮಕ್ಕಳು ಕಾಗದದ ಎಲೆಗಳಲ್ಲಿ ಪುರಿ ಎಂಬ ಅನ್ನವನ್ನು ಬಡಿಸಿಕೊಂಡು ಊಟಮಾಡುತ್ತಿದ್ದರು. ನನ್ನನ್ನು ನೋಡಿ ಊಟಕ್ಕೆ ಕರೆದರು. ಬೇಡವೆಂದರೂ ಬಿಡದೆ ಪುರಿ ಕೊಟ್ಟರು. ನಾನು ನಗುತ್ತ ಅನ್ನಕ್ಕೆ ಸಾಂಬಾರು ಸಾಲದು ಎಂದೆ. ಆ ಪುರಿಯನ್ನು ಒಂದೇ ಬಾಯಿಗೆ ಹಾಕಿಕೊಂಡು ಚೆನ್ನಾಗಿದೆ ಎಂದಾಗ, ನಾಳೆಯೂ ಬನ್ನಿ ಸಾರ್ ಎಂದರು.

25 - 9 - 1984 — ಶೂದ್ರ ಶ್ರೀನಿವಾಸ್

# ಒಂದು ಪ್ರಯೋಗ :

ಎಚ್. ಎಸ್. ಶಿವಪ್ರಕಾಶ್‌ರವರ ಎರಡು ಮುಖ್ಯ ಕವನಗಳಾದ 'ಸಿಂಗಿರಾಜ ಸಂಪಾದನೆ' ಹಾಗೂ 'ಸಮಗಾರ ಭೀಮವ್ವ' ಸೆಪ್ಟಂಬರ್ 2 ಮತ್ತು 3 ರಂದು ಬೆಂಗಳೂರು ನ್ಯಾಷನಲ್ ಕಾಲೇಜು ಸಭಾಂಗಣದಲ್ಲಿ ರಂಗ ಪ್ರಯೋಗವನ್ನು ಕಂಡವು. ಕಾವ್ಯಮಂಡಳ ಹಾಗೂ ಸಮುದಾಯ ತಂಡದ ಮೂಲಕ ನಡೆದ ಈ ಎರಡೂ ಪ್ರಯೋಗಗಳನ್ನು ಜನಾರ್ಧನ ನಿರ್ದೇಶಿಸಿದರು.

ಪ್ರಯೋಗಕ್ಕೆ ಸಂಬಂಧಿಸಿದಂತೆ ಈ ಎರಡು ವೇದಿಕೆಗಳು ಹೇಳಿಕೊಂಡಿರುವ "ಕನ್ನಡ ಕವಿತೆಯನ್ನು ಈ ಹೊತ್ತಿನ ಇನ್ನಿತರ ಕಲಾಸಾಧ್ಯತೆಗಳ ಮೂಲಕ ಕೇಳುಗ-ಪ್ರೇಕ್ಷಕ ಸಮ್ಮುಖವಾಗಿಸುವುದು ಈ ಪ್ರಯೋಗದ ಆಶಯ" ಎಂಬ ಮಾತನ್ನು ದಿಟವಾಗಿಸುವುದರಲ್ಲಿ ಸಾಧ್ಯವಾಗಿದ್ದು 'ಸಿಂಗಿರಾಜ ಸಂಪಾದನೆ' ಯಲ್ಲಿ. ಆದರೆ ಈ ಸಾಧ್ಯತೆಯನ್ನು 'ಸಮಗಾರ ಭೀಮವ್ವ'ದಲ್ಲಿ ಕಂಡುಕೊಳ್ಳಲಾಗಲಿಲ್ಲ.

ಪ್ರಯೋಗಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಕರಪತ್ರದಲ್ಲಿಯ 'ಸಿಂಗಿರಾಜ ಸಂಪಾದನೆ'ಯ ಒಟ್ಟು ಕಥೆಯಿಷ್ಟು : "ಸಿಂಗಿರಾಜ–ಬಸವನ ನಾಯಕತ್ವದ ಕಲ್ಯಾಣದ ಚಳುವಳಿಯಲ್ಲಿ ಭಾಗವಹಿಸಿದವನು. ಚಳವಳಿಯ ಮುಂಚೂಣಿಯಲ್ಲಿದ್ದ ಪ್ರಮಥರೆಲ್ಲ ಚಳುವಳಿಯ ಭಗ್ನತೆಯಿಂದ ದಿಕ್ಕುಪಾಲಾದರು, ಬಸವಣ್ಣ ಕಲ್ಲಿಗೆ ಸಂದ ಪ್ರಭು-ಅಕ್ಕ, ಕದಳಿದ್ವಾರಕ್ಕೆ ನಡೆದರು. ಚೆನ್ನಬಸವಣ್ಣ ಉಳವಿಯತ್ತ ನಡೆದ. ಬಿಜ್ಜಳನ ಕಾರ್ಯಕ್ಕೆ ಗುರಿಯಾದ ಸೆರೆಯಾಳು ಸಿಂಗಿರಾಜ ಮಾರನೆಯ ಬೆಳಗ್ಗೆ ಮರಣದಂಡನೆಗೆ ಗುರಿಯಾಗುವವನಿದ್ದಾನೆ. ಮರಣ ದಂಡನೆಯ ಮುನ್ನ ರಾತ್ರಿ ಭಯಕಂಪಿತ ಸಿಂಗಿರಾಜನ ಅಂತರಂಗದ ಅನಿಸಿಕೆಗಳು ಈ ಕವನದ ಮುಖ್ಯನೆಲೆ. ಚಳುವಳಿಯ ಕನಸು ಭಗ್ನಕೊಂಡದ್ದನ್ನು, ಭಗ್ನತೆಯ ಮಧ್ಯೆ ಹುಟ್ಟಿದ ಹಿಂಸೆ, ಕಮರಿಹೋದ ಎಲ್ಲ ಆಸೆಗಳು ಸಿಂಗಿರಾಜನ ಮನಸ್ಸಿನಲ್ಲಿ ಸುರುಳಿ ಸುರುಳಿಯಾಗಿ ವಿನ್ಯಾಸಗೊಳ್ಳುತ್ತದೆ."

ಸರಳವಾದ ರಂಗಸಜ್ಜಿಕೆಯ ಮೂಲಕ ಮೂಲ ಕಾವ್ಯಕ್ಕೆ ಧಕ್ಕೆ ಬರದಂತೆ ಬೇರೆ ಬೇರೆ ಪಾತ್ರಗಳ ಮೂಲಕ ನಿರೂಪಿಸಿದ್ದು ಅರ್ಥಪೂರ್ಣವಾಗಿತ್ತು. ಬೇರೆ ನಾಟಕಗಳ ರೀತಿಯಲ್ಲಿ ಮನರಂಜನೆಯನ್ನು ಇಲ್ಲಿ ನಿರೀಕ್ಷಿಸಲಾಗುತ್ತಿರಲಿಲ್ಲ. ಸಿಂಗಿರಾಜ ಸಂಪಾದನೆಯಂಥ ಉತ್ತಮ ಕವನವನ್ನು ಅರಿಯುವತ್ತ ಇಂಥ ಪ್ರಯೋಗಗಳು

ಹೆಚ್ಚು ಕೆಲಸ ಮಾಡುತ್ತವೆ ಅನ್ನಿಸಿತು. ಮತ್ತೆ ಒಂದು ಕವನಕ್ಕೆ ಇಂಥ ರಂಗರೂಪ ಗಳನ್ನು ಕೊಡುವುದು ಅಗತ್ಯವೇ ಎಂದುಕೊಂಡಾಗಲೂ, ಯಾಕಿರಬಾರದು ? ಎಂಬ ಉತ್ತರವೂ ನಮ್ಮಲ್ಲಿಯೇ ಇರುವುದರಿಂದಲೇ ಪ್ರಯೋಗದ ವಿವಿಧ ಸಾಧ್ಯತೆಗಳತ್ತ ಸಾಗುತ್ತಿರುತ್ತೇವೆ.

'ಸಮಗಾರ ಭೀಮವ್ವ' ಒಂದು ಹಂತದಲ್ಲಿ "ಸಿಂಗಿರಾಜ ಸಂಪಾದನೆ" ಯಷ್ಟು ಗಟ್ಟಿಮುಟ್ಟಾದ ಪ್ರಯೋಗವಾಗಿರಲಿಲ್ಲ ಎಂದು ಮೇಲ್ನೋಟಕ್ಕೆ ತೋರಿದರೂ; ಇಲ್ಲಿ ಹೆಚ್ಚು ಮೂಕಾಭಿನಯವಿದ್ದುದರಿಂದ ಒಟ್ಟು ಕಥೆಯನ್ನು ತಲುಪಿಸುವಲ್ಲಿ ತೊಡಕಿತ್ತೇ ಅಂದುಕೊಂಡರೂ ಶೈಲಿಯ ದೃಷ್ಟಿಯಿಂದ, ಅದರಲ್ಲೂ ಬಸವಲಿಂಗಪ್ಪ ನಂಥ ಉತ್ತಮನಟ ಒಟ್ಟು ದೇಹವನ್ನು ನಟನೆಗೆ ತೊಡಗಿಸುವುದು ಮಾರ್ಮಿಕ ವಾಗಿತ್ತು. 'ಸಿಂಗಿರಾಜ ಸಂಪಾದನೆ'ಯಲ್ಲಿ ರಾಜಾರಾಂರವರ ನಟನೆ 'ಸಮಗಾರ ಭೀಮವ್ವ' ಬಸವಲಿಂಗಪ್ಪನ ಮೂಕಾಭಿನಯ ಮತ್ತೆ ನೆನಪು ಮಾಡಿಕೊಳ್ಳುವಂಥದ್ದು.

"ಯಾರ ಕೈಗೂ ಸಿಕ್ಕದೆ ಮಿಂಚಿನಂತೆ ಮೈಗರೆಯುವ ನಾಗಲಿಂಗ ಕೊಡಗೂಸು ಗೆಳತಿ ಸಮಗಾರ ಭೀಮವ್ವನ ರಕ್ಷೆಗೆ ಸಲ್ಲುತ್ತಾನೆ: ತಾನು ಬಿಟ್ಟು ಬಂದ ತಾಯಿ ಯನ್ನು ಸಮಗಾರ ಭೀಮವ್ವನ ಮೂಲಕ ಮತ್ತೆ ಪಡೆಯುವ ಬಗ್ಗೆ ಈ ಕವಿತೆಯ ಮುಖ್ಯ ಕ್ರಿಯೆಯಾಗಿದೆ. ಬ್ರಿಟಿಷರ ಆಗಮನದ ಸಂದರ್ಭದಲ್ಲಿನ ಯಾಂತ್ರಿಕ ಕಾರ್ಯಕ್ಕೆ ಪ್ರತಿಯಾಗಿ ಪ್ರಕೃತಿಯ ಸತ್ವವಾದ ಹಾಲಿನ ಸ್ಪರ್ಶದ ಅನಿವಾರ್ಯತೆಯ ಕರೆ ಈ ಕವಿತೆಯ ಮುಖ್ಯ ಧ್ವನಿ" (ನಾಟಕದ ಬಗೆಗಿನ ಕರಪತ್ರದಿಂದ ತೆಗೆದು ಕೊಂಡದ್ದು).

'ಸಮಗಾರ ಭೀಮವ್ವ'ದಲ್ಲಿ ಜಯಶ್ರೀಯಂಥ ಉತ್ತಮ ನಟಿಯನ್ನು ಹೆಚ್ಚಿನ ಅರ್ಥದಲ್ಲಿ ಬಳಸಿಕೊಳ್ಳಲಾಗಲಿಲ್ಲವೇನೋ ಅನ್ನಿಸಿತು. ಆದರೆ ಇದೇ ಸಮಯಕ್ಕೆ ಬಸವಲಿಂಗಪ್ಪನ ನಟನೆಯೂ ನೋಡುಗರಿಗೆ ಬೋರ್ ಎನ್ನುವ ಮಟ್ಟಿಗೆ ಜಾಸ್ತಿಯಾ ಯಿತು. ಇದಕ್ಕೆ ಮತ್ತೊಂದು ಮುಖ್ಯ ಕಾರಣವೆಂದರೆ; ಹಿನ್ನೆಲೆಯಿಂದ ಕವನ ವನ್ನು ನಿರೂಪಿಸುವಲ್ಲಿ ಇದ್ದ ಕೊರತೆ.

ಒಟ್ಟಿನಲ್ಲಿ ಇದೊಂದು ಉತ್ತಮ ಪ್ರಯೋಗ. ನಿರ್ದೇಶಕರ ಜೊತೆಗೆ ಸಾಕಷ್ಟು ಕೆಲಸಮಾಡಿದ ಕಿ. ರಂ. ನಾಗರಾಜ್‌ರವರಿಗೂ ಇದರ ಸೋಲು-ಗೆಲುವಿನ ಪ್ರತಿಫಲ ಸಲ್ಲಬೇಕು.

## ಜಿ. ಎಸ್. ಶೆಣೈ :

ಶೆಣೈ ಈಗಾಗಲೇ ಚಿತ್ರಕಲೆ ಮಾಧ್ಯಮಕ್ಕೆ ಸಂಬಂಧಿಸಿದಂತೆ ಚರ್ಚೆಯಾಗಿದ್ದಾರೆ. ಲೋಪದಲ್ಲಿ ವಿವಿಧ ರೂಪಗಳನ್ನು ನಿರ್ಮಿಸಿದ ವ್ಯಕ್ತಿ. ವಾಸುದೇವ ನಂತರ ಈ ಮಾಧ್ಯಮದಲ್ಲಿ ಚರ್ಚೆಯಾದ ಶೆಣೈರವರು ಇತ್ತೀಚೆಗೆ ಬೆಂಗಳೂರಿನ ಶೃಂಗಾರ ಕಲಾ ಗ್ಯಾಲರಿಯಲ್ಲಿ ತಮ್ಮ ಹಂಪೆಗೆ ಸಂಬಂಧಿಸಿದ ಚಿತ್ರಗಳನ್ನು ಪ್ರದರ್ಶಿಸಿದರು. ಇದರಲ್ಲಿ ಕೆಲವು ಬೇರೆ ಚಿತ್ರಗಳು ಇದ್ದುವು, ಅದರಲ್ಲಿ ಗಣೇಶನ ವೈಭವ ಪೂರಿತ ಶಿಲ್ಪಕೃತಿ ಮನಮೋಹಕವಾಗಿತ್ತು. ಆದರೆ ನಿಜವಾಗಿಯೂ ಶೆಣೈರವರ ಕುಂಚ ಸಾಕಷ್ಟು ಕಲಾತ್ಮಕವಾಗಿ ಕೆಲಸಮಾಡಿರುವುದು ಗೋಚರವಾಗಿದ್ದು ಹಂಪೆಗೆ ಸಂಬಂಧಿಸಿದ ಲ್ಯಾಂಡ್ ಸ್ಕೇಪ್‌ಗಳಲ್ಲಿ (ಭೂ ದೃಶ್ಯಗಳಲ್ಲಿ) 84ರ ನಂತರ ರಚಿತವಾದ ಸುಮಾರು 10 ವರ್ಣ ಚಿತ್ರಗಳು ಶೆಣೈರವರ ಪ್ರತಿಭೆಯನ್ನು ಎತ್ತಿತೋರಿಸುವಂತಿದ್ದುವು. ಈ ಎಲ್ಲ ಚಿತ್ರಗಳನ್ನು ಅಲ್ಲಿಯೇ ಕೂತು ಕುಂಚದ ಮೂಲಕ ರಕ್ತ-ಮಾಂಸವನ್ನು ಪಡೆದವುಗಳಲ್ಲ. ಸಾಕಷ್ಟು ಟಿಪ್ಪಣಿಮಾಡಿಕೊಂಡು ಅದರ ನೆನಪಿನ ಆಧಾರದ ಮೇಲೆ ರೂಪುಗೊಂಡ ಚಿತ್ರಗಳು. ಆದರೂ ಒಬ್ಬ ಕಲಾವಿದ ತನ್ನ ಅಲ್ಪಾವಧಿಯಲ್ಲಿ ಇಷ್ಟೊಂದು ಅದ್ಭುತ ಕೆಲಸವನ್ನು ಮಾಡಬಲ್ಲ ಎಂಬುದನ್ನು ಪ್ರದರ್ಶನ ನೋಡಿದ ಯಾರು ಬೇಕಾದರೂ ಹೇಳಬಹುದಾಗಿತ್ತು.

ತುಂಬ ಹಿತಮಿತವಾದ ಬಣ್ಣಗಳಿಂದ ಒಟ್ಟು ಪ್ರದೇಶದ ಪಳಿಯುಳಿಕೆಗಳನ್ನು ನೋಡಿರುವುದು ಮೆಚ್ಚಿಗೆಯಾಗತಕ್ಕಂತಹ ವಿಷಯ. ಹಾಗೆ ನೋಡಿದರೆ ಹಂಪೆ ಈಗಾಗಲೇ ಬಹಳಷ್ಟು ಕಲಾವಿದರಿಗೆ ಜೀವದಾತುವಾಗಿದೆ. ಆದರೆ ಆ ಜೀವದಾತುವನ್ನು ಕುಲಗೆಡಿಸದೆ ಜೀವಂತವಾಗಿಡಬೇಕಾದರೆ ಒಬ್ಬ ಕಲಾವಿದನಿಗೆ ಸಾಕಷ್ಟು ತಾಳೆ ಮತ್ತು ಪ್ರತಿಭೆ ಇರಬೇಕಾಗುತ್ತೆ. ಅಗವಾ ಕುಂಚದ ಮೂಲಕ ಲೀಲಾ ಜಾಲವಾಗಿ ಬಣ್ಣಗಳನ್ನು ಹರಿಸುವ ಚಮತ್ಕಾರವೂ ಬೇಕಾಗುತ್ತೆ. ಅಂಥ ಕೆಲಸವನ್ನು ಶೆಣೈರವರು ಮಾಡಿದ್ದಾರೆ. ಹಾಗೆಯೇ ಇಲ್ಲಿಯ ಒಟ್ಟು ಚಿತ್ರಗಳನ್ನು ನೋಡಿದಾಗ ಚರಿತ್ರೆಯ ಅಧ್ಯಯನದ ಕೊರತೆ ತುಂಬಿಕೊಂಡಿದೆ ಎಂದು ಎಲ್ಲಿಯೂ ಅನಿಸುವುದಿಲ್ಲ. ಯಾಕೆಂದರೆ ನಮಗೆಲ್ಲರಿಗೂ ಹಂಪೆ ಬೇರೆ ಬೇರೆ ರೂಪದಲ್ಲಿ ಪರಿಚಯವಾಗಿದ್ದರೂ ; ಕಲಾವಿದ ನೋಡುವ ದೃಷ್ಟಿಯಿಂದಲೂ ಒಂದು ರೀತಿಯ 'ಏಕೀಭಾವ' ನೋಡುಗರಿಗೆ ತಲುಪಬೇಕಾಗುತ್ತೆ, ಆ ತಲುಪಿಸುವ ಕೆಲಸವನ್ನು ಶೆಣೈ ತೋರಿಸಿದ್ದಾರೆ.

—ಸಿದ್ಧಾರ್ಥ

# ಒಳನೋಟ

**ಒಂದು ವಿವರಣೆ : ಪೋಲಂಕಿ ಮತ್ತು ಸಂಕ್ರಮಣ,**

ಕಳೆದ ವರ್ಷ ಶೂದ್ರಕ್ಕೆ ಹತ್ತು ವರ್ಷ ತುಂಬಿದ ಸಂದರ್ಭದಲ್ಲಿ 'ಸಾಹಿತ್ಯ ಮತ್ತು ಧರ್ಮ'ಕ್ಕೆ ಸಂಬಂಧಿಸಿದಂತೆ ಒಂದು ಚರ್ಚೆಯನ್ನು ಏರ್ಪಡಿಸಿದ್ದೆವು. ಈ ಚರ್ಚೆಯನ್ನು ಬೆಂಗಳೂರಿನಿಂದ ಹೊರಗೆ ಒಂದು ತೋಟದಲ್ಲಿ ನಡೆಸುವ ಸಿದ್ಧತೆಯಿತ್ತು. ಆದರೆ ಕಾರಣಾಂತರಗಳಿಂದ ಆ ಚರ್ಚೆಯನ್ನು ಬೆಂಗಳೂರಿನಲ್ಲಿಯೇ ನಡೆಸಬೇಕಾಯಿತು. ಆ ಚರ್ಚೆಯಲ್ಲಿ ಪೋಲಂಕಿರಾಮಮೂರ್ತಿಯವರಿಗೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ವೈದಿಕ ಪ್ರಜ್ಞೆ ಬೆಳೆದು ಬಂದ ಕ್ರಮದ ಬಗ್ಗೆ ಪ್ರಬಂಧ ಮಂಡಿಸಲು ಕೇಳಿಕೊಂಡೆ. ಆದರೆ ಪೋಲಂಕಿಯವರು "ನಾನು ಅಡಿಗರಲ್ಲಿ ಮತ್ತು ಅನಂತಮೂರ್ತಿಯವರಲ್ಲಿ ಬ್ರಾಹ್ಮಣ ಪ್ರಜ್ಞೆ ಎಂಬ ವಿಷಯದ ಬಗ್ಗೆ ಪ್ರಬಂಧ ಮಂಡಿಸುತ್ತೇನೆ" ಎಂದು ಬರೆದರು. ಆಗ ಗೆಳೆಯರೊಡನೆ ಚರ್ಚಿಸಿ, ಆ ಪ್ರಬಂಧವನ್ನು ಒಟ್ಟು ಚರ್ಚೆಯಲ್ಲಿ ತೆಗೆದುಕೊಳ್ಳುವುದಿಲ್ಲ, ಊಟದ ನಂತರ ಸಮಯ ಮಾಡಿಕೊಂಡು ಚರ್ಚಿಸಬಹುದು ಎಂದು ಪತ್ರ ಬರೆದೆ.

ಪೋಲಂಕಿಯವರು ಚರ್ಚೆಯಲ್ಲಿ ಭಾಗವಹಿಸಿದರು. ಅವರ ಒಟ್ಟು ಮಾತುಗಳನ್ನು ಯಾರೂ ಅಷ್ಟು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಇದಕ್ಕಾಗಿ ಸಭೆ ಮುಗಿದ ಮೇಲೆ ನನ್ನ ಹತ್ತಿರ ತುಂಬ ಪರದಾಡಿದರು. ಆಗ ನಾನು "ಟೇಕ್ ಇಟ್ ಲೈಟ್ಲೀ" ಎಂದೆ. ಚರ್ಚೆ ಮುಗಿದ ಒಂದು ತಿಂಗಳ ನಂತರ ರಿಜಿಸ್ಟರ್ಡ್ ಪೋಸ್ಟ್‌ನಲ್ಲಿ ಲೇಖನ ಬಂತು. ಕವರ್‌ನ ಮೇಲೆ ಅಂದವಾದ ಹುಲಿಯ ಸ್ಟ್ಯಾಂಪ್ ಇತ್ತು. ಈಗಲೂ ಆ ಹುಲಿಯ ಚಿತ್ರವನ್ನು ಜೋಪಾನವಾಗಿಟ್ಟಿದ್ದೇನೆ. ಲೇಖನ 49 ಪುಟವಿತ್ತು ಟೈಪ್‌ಮಾಡಿದ ಕಾಪಿ, ಶೂದ್ರದಲ್ಲಿ 60 ಪುಟ ಬರುತ್ತಿತ್ತು. ಸ್ವಲ್ಪ ಎಡಿಟ್ ಮಾಡಿ 20 ಪುಟಕ್ಕೆ ಕಳಿಸಿ ಎಂದು ಪತ್ರ ಬರೆದೆ. ಅದಕ್ಕೆ ಅವರು ಒಪ್ಪಲಿಲ್ಲ. ಇಷ್ಟಾದರೂ ಅದನ್ನು ಎರಡು ಕಂತುಗಳಲ್ಲಿ ಪ್ರಕಟಿಸುತ್ತಿದ್ದೆ. ಆದರೆ ಸಿಕ್ಕಿ ಸಿಕ್ಕಿದವರೆಲ್ಲ; "ನೀನು ಅದನ್ನು ಪ್ರಕಟಿಸುವುದಕ್ಕೆ ಭಯ ಪಡ್ತೀಯ ನಿನಗೆ ಅನಂತಮೂರ್ತಿಯವರನ್ನು ಕಂಡರೆ ಭಯ" ಈ ರೀತಿಯಲ್ಲಿ ಮಾತುಗಳನ್ನು ಆಡತೊಡಗಿದರು. ಕೆ.ನ. ಶಿವತೀರ್ಥ ಒಮ್ಮೆ ಬೆಂಗಳೂರಿನ ಎಂ.ಜಿ. ರಸ್ತೆಯಲ್ಲಿ ಸಿಕ್ಕಿ ನಾನಾ ರೀತಿಯಲ್ಲಿ ಮಾತಾಡತೊಡಗಿದರು ನನಗೆ ನಿಜವಾಗಿಯೂ ನೋವಾಯಿತು. ಅನಂತಮೂರ್ತಿಯವರೂ ಎಂದೂ ಆ ರೀತಿಯ ಒತ್ತಡವನ್ನು ತಂದವರಲ್ಲ, ಹಿಂದೆ ನನ್ನ ಮತ್ತು ಲಂಕೇಶ್‌ರವರಿಗೆ ಸಂಬಂಧಿಸಿದಂತೆ ಇದೇ ರೀತಿ ಆಡಿಕೊಳ್ಳುತ್ತಿದ್ದರು, ನನ್ನ ಸಾಹಿತ್ಯದ ಸಂದರ್ಭದಲ್ಲಿ ಅವರೆಂದೂ ಆ ರೀತಿ ನಡೆದುಕೊಂಡಿಲ್ಲ.

ನಾನು ಲೇಖನವನ್ನು ತಿರಸ್ಕರಿಸಲು ಮೇಲಿನದೇ ಮುಖ್ಯ ಕಾರಣ. ಒಟ್ಟನಲ್ಲಿ ನನ್ನ ಬಗ್ಗೆ ಪೋಲಂಕಿಯವರು ಹೇಳಿರುವ ಮಾತುಗಳಿಗೆಲ್ಲ, ಅಭಿಮಾನ ಪೂರ್ವಕವಾಗಿ ಋಣಿಯಾಗಿದ್ದೇನೆ. ಇಲ್ಲಿಯವರೆವಿಗೆ ಸಂಕ್ರಮಣ ಕ್ರಮವಾಗಿ ಬರುತ್ತಿತ್ತು. ಪಾಟೀಲರು ಪ್ರೀತಿಯಿಂದ ಈ ಸಂಚಿಯನ್ನು ಕಳಿಸಿಲ್ಲ. ಅದನ್ನು ಓದಿ ನನಗೆ ಹೃದಯಾಘಾತವಾಗ ಬಹುದೆಂದು.

28–9–84 —ಶೂದ್ರ ಶ್ರೀನಿವಾಸ್

# ಸಾದರ ಸ್ವೀಕಾರ

**ತೆರೆದಷ್ಟೇ ಬಾಗಿಲು** (ಕಥಾಸಂಕಲನ) ಜಯಂತಕಾಯ್ಕಿಣಿ ಅನನ್ಯ ಪ್ರಕಾಶನ: ನಜರಬಾದ: ಮೈಸೂರು-570 010 ಬೆಲೆ : ಒಂಬತ್ತು ರೂಪಾಯಿ

---

**ಷೇಕ್‌ಸ್ಪಿಯರ್—ಜೂಲಿಯಸ್ ಸೀಸರ್**—ಭಗವಾನ್, ಮಹಿಮ ಪ್ರಕಾಶನ ಕುವೆಂಪುನಗರ, ಮೈಸೂರು-570 009, ನಾಲ್ಕನೇ ಮುದ್ರಣ,
ಬೆಲೆ : ಏಳು ರೂಪಾಯಿ

---

**ಏಳು ಸುತ್ತಿನ ಕೋಟೆ** (ಕಾದಂಬರಿ) ಮಾವಿನಕೆರೆ ರಂಗನಾಥನ್, ಪುರೋಗಾಮಿ ಪ್ರಕಾಶನ. ನಂ. 11, 10ನೇ ಕ್ರಾಸ್ ಮಲ್ಲೇಶ್ವರಂ, ಬೆಂಗಳೂರು-2
ಬೆಲೆ : ಹನ್ನೆರಡು ರೂಪಾಯಿ

---

**ಉಳಿದದ್ದು ಆಕಾಶ** (ಕಥಾಸಂಕಲನ) ಮಾವಿನಕೆರೆ ರಂಗನಾಥನ್ ಪುರೋಗಾಮಿ ಪ್ರಕಾಶನ, ಬೆಲೆ : ಹನ್ನೆರಡು ರೂಪಾಯಿ

---

**ಬಾಳವ್ವನ ಕನಸುಗಳು** (ಕಾದಂಬರಿ) ರಾಘವೇಂದ್ರಪಾಟೀಲ ಸುಂದರ ಪುಸ್ತಕ ಪ್ರಕಾಶನ, ಮಾಳಮಡ್ಡಿ, ಧಾರವಾಡ-7 ಬೆಲೆ: ಹನ್ನೆರಡು ರೂಪಾಯಿ

---

**ಚಂದನ** (ಕನ್ನಡ ಮತ್ತು ಇಂಗ್ಲೀಷ್) ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ ಪತ್ರಿಕೆಗಳು. ಖಾಸಗಿ ಪ್ರಸಾರಕ್ಕಾಗಿಮಾತ್ರ .

---

# ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ವ್ಯಾಪಕ ಕಾರ್ಯಕ್ರಮ

ಕರ್ನಾಟಕದಲ್ಲಿ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ, ಕೈಮಗ್ಗ ಮತ್ತು ಕರಕುಶಲ ಕೈಗಾರಿಕೋದ್ಯಮಗಳ ಅಭಿವೃದ್ಧಿಗಾಗಿ ಹೊಸ ಉತ್ತೇಜಕ ವಾತಾವರಣ ಕಲ್ಪಿತವಾಗಿದೆ.

1984-85ನೇ ಸಾಲಿಗಾಗಿ ಸಣ್ಣ ಹಾಗೂ ಗೃಹ ಕೈಗಾರಿಕೆಗಳ ಅಭಿವೃದ್ಧಿ ಸಾಧಿಸಲು ಅನೇಕ ಆಶಾದಾಯಕವಾದ ಹೊಸ ಯೋಜನೆಗಳನ್ನು ರೂಪಿಸಲಾಗಿದೆ.

ಈ ಯೋಜನೆಗಳು, ಆಸಕ್ತ ಕೈಗಾರಿಕೋದ್ಯಮಿಗಳಿಗೆ ಆರ್ಥಿಕ ಸಹಾಯ ಮತ್ತು ತಾಂತ್ರಿಕ ಜ್ಞಾನವನ್ನು ಸಹ ಒದಗಿಸುತ್ತವೆ.

ಈ ಯೋಜನೆಗಳು :

1. 1985ನೇ ಡಿಸೆಂಬರ್ ತಿಂಗಳ ವೇಳೆಗೆ 36 ಕೋಟಿ ರೂ. ವೆಚ್ಚದಲ್ಲಿ 1510 ಕೈಗಾರಿಕಾ ಷೆಡ್ಡುಗಳನ್ನು ನಿರ್ಮಿಸಲಾಗುವುದು. ಕಳೆದ 20ವರ್ಷಗಳಲ್ಲಿ 120 ಕೋಟಿ ರೂ. ವೆಚ್ಚದಲ್ಲಿ 2000 ಕೈಗಾರಿಕಾ ಷೆಡ್ಡುಗಳನ್ನು ಮಾತ್ರ ನಿರ್ಮಿಸಲಾಗಿತ್ತು.
2. ಔಷಧಿಗಳು, ಚರ್ಮ ಮತ್ತು ಕೈಗಾರಿಕಾ ಸಲಕರಣೆಗಳು ಮುಂತಾದವುಗಳಿಗೆ ಸಕ್ರಿಯ ಕೈಗಾರಿಕಾ ಎಸ್ಟೇಟುಗಳನ್ನು ಸ್ಥಾಪಿಸಲಾಗುವುದು.
3. ಸಣ್ಣ ಕೈಗಾರಿಕೆಗಳ ಮಾರಾಟ ನಿಗಮದ ನಿರ್ಮಾಣ.
4. ಕೈಮಗ್ಗ ತಾಂತ್ರಿಕ ಸಂಸ್ಥೆಯ ಸ್ಥಾಪನೆ.
5. ರಾಜ್ಯದ ನಾರು ಅಭಿವೃದ್ಧಿ ನಿಗಮದ ಸ್ಥಾಪನೆ.
6. ಚರ್ಮ ತಾಂತ್ರಿಕ ಸಂಸ್ಥೆಯ ಸ್ಥಾಪನೆ.
7. ಪ್ರಾಥಮಿಕ ಸಹಕಾರಿ ಕೈಮಗ್ಗ ಸಂಘಗಳ ಎಲ್ಲ ನೇಕಾರ ಸದಸ್ಯರುಗಳಿಗೂ ಈಗ ಅನ್ವಯವಾಗುತ್ತಿರುವ ಉಳಿತಾಯ ಕಾಣಿಕೆ ನಿಧಿ ಯೋಜನೆಯನ್ನು (Contributory thrift fund scheme) ಕೈಗಾರಿಕಾ ಅಭಿವೃದ್ಧಿ ನಿಗಮಕ್ಕೇ ವಿಸ್ತರಿಸುವುದು.
8. ವಿದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರಿಗಾಗಿಯೇ ಪ್ರತ್ಯೇಕ ಕೈಗಾರಿಕಾ ವಲಯಗಳ ಅಭಿವೃದ್ಧಿ.

ಕರ್ನಾಟಕ ವಾರ್ತೆ

L/NP/KRNU/72 No. M (2) PRB 211/73-74

ಮುಂದಿನ ಸಂಚಿಕೆಯಲ್ಲಿ :

ಇಸಾಡರ್ ಡಂಕನ್—ಕೆ.ವಿ. ತಿರುಮಲೇಶ್—ಸುಚೇತನ ಸ್ವರೂಪ ಚಂದ್ರಶೇಖರತಾಳ್ಯ—ವೀಚಿ—ವೇಣುಗೋಪಾಲ ಸೊರಬ — ಮಂಜುನಾಥ್ ಇಂದುವದನೆ—ಪದ್ಮರಾಜ ದಂಡಾವತಿ—ಪುಸ್ತಕ ಪರಿಚಯ—ಕನಸಿಗೊಂದು ಕಣ್ಣು ಇತ್ಯಾದಿ.

Printed at : Shalivahan Printers, Bangalore-53
Editor & Publisher M. SRINIVAS